# ರಕ್ಕಸಗಿ-ತಂಗಡಗಿ ಯುದ್ಧದ ನಂತರ ಹಂಪಿಯ ಸ್ಥಿತಿಗತಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ನೋಂದಣಿ ಸಂಖ್ಯೆ: ೧೬೦೧೦೮೦೩೦೨೧





ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೬-೧೭

# ರಕ್ಕಸಗಿ–ತಂಗಡಗಿ ಯುದ್ಧದ ನಂತರ ಹಂಪಿಯ ಸ್ಥಿತಿಗತಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೦೮೦೩೦೦೨೧



ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩ ೨೭೬
೨೦೧೬–೧೭

# ಪರಿವಿಡಿ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

**ಪ್ರಸ್ತಾವನೆ**

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

## ಪ್ರಸ್ತಾವನೆ

ಆದಿಮಾನವ ಪ್ರಕೃತಿಯ ಕೂಸಾಗಿದ್ದನು. ಅವನು ಕಾಡಿನಲ್ಲಿ ಅಲೆದಾಟದ ಜೀವನವನ್ನು ಸಾಗಿಸುತ್ತಿದ್ದನು. ಅಲೆಮಾರಿ ಮಾನವ ಕ್ರಮೇಣ ವಿಕಾಸ ಹೇಗೆಯೇ ಮುಂದವರೆಯಿತು. ಸಾಕು ಪ್ರಾಣಿಗಳಾದ ನಾಯಿ, ಕುದುರೆ, ಹಸುಗಳನ್ನು ಪಳಗಿಸಿ ತನ್ನ ಅನುಕೂಲಕ್ಕಾಗಿ ಉಪಯೋಗಿಸಲು ಪ್ರಾರಂಭಿಸಿದನು. ಬಿಲ್ಲು ಬಾಣಗಳನ್ನು ಉಪಯೋಗಿಸಲು ಪ್ರಾರಂಭಿಸಿದನು. ಈ ಹಂತದಲ್ಲಿ ಆಹಾರವನ್ನು ಬೆಳೆಸಿಕೊಳ್ಳುವುದನ್ನು ಅರಿತನು. ಪಶುಪಾಲನೆ ಆರಂಭಿಸಿದನು. ಬಹುಶಃ ಇದುವರೆಗೆ ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವನಿಗೆ ಈ ರೀತಿಯ ಜೀವನವು ಬೇಸರವಾಗಿ ಒಂದು ಕಡೆ ನೆಲೆ ನಿಂತ. ಮನೆಗಳನ್ನು ಕಟ್ಟಿಕೊಂಡ ಚಿಕ್ಕ ಪುಟ್ಟ ಗುಂಪುಗಳನ್ನು ಮಾಡಿಕೊಂಡು ಹಳ್ಳಿ, ಗ್ರಾಮಗಳನ್ನು ಕಟ್ಟುವಷ್ಟು ಬುದ್ಧಿವಂತನಾದ. ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ ವ್ಯವಸಾಯ, ಪಶುಪಾಲನೆ, ನೂಲುವುದು, ನೇಯ್ಯುವುದು, ಮಡಕೆ, ಕುಡಿಕೆ ಮಾಡುವುದು ಮುಂತಾದವುಗಳನ್ನು ಕಲಿತನು. ಫಲವತ್ತಾದ ಕಣಿವೆಗಳಲ್ಲಿ ಜೀವಿಸತೊಡಗಿದನು. ಈ ಅಲೆಮಾರಿ ಜನ ಸಮೂಹ ಒಂದೆಡೆ ನೆಲೆಸಿರುವುದರಿಂದ ದುಡಿಮೆಯ ಹಂಚಿಕೆ ಅವಶ್ಯಕವಾಯಿತು.

ಹೀಗೆ ವ್ಯವಸ್ಥೆಗೊಂಡ ಹಲವಾರು ಕುಟುಂಬಗಳ ಸಮೂಹಗಳೇ ಗ್ರಾಮಗಳು. ಹೀಗೆ ಪ್ರಾರಂಭವಾದ ಗ್ರಾಮಗಳೇ ಬೆಳೆದು ದೊಡ್ಡ ದೊಡ್ಡ ಪಟ್ಟಣಗಳು ಮತ್ತು ನಗರಗಳಾದವು. ಅನೇಕ ಗ್ರಾಮಗಳು, ಪಟ್ಟಣಗಳ ಹಾಗೂ ನಗರ ಸಮೂಹ ನಾಡು ಅಥವಾ ರಾಜ್ಯ ಎನಿಸಿತು. ಹೀಗೆ ಯಾವುದೇ ಒಂದು ರಾಜ್ಯ ಅಥವಾ ಸಾಮ್ರಾಜ್ಯ ಹುಟ್ಟುವುದಕ್ಕೆ ಆರಿಸಿಕೊಂಡ ಪ್ರದೇಶವೇ ಅತ್ಯಂತ ಫಲವತ್ತಾದ ನದಿ ಬಯಲುಗಳಲ್ಲಿಯೇ ಹುಟ್ಟುತ್ತವೆ. ಹಾಗೆಯೇ ಪ್ರಪಂಚದ ಇತಿಹಾಸವನ್ನು ಗಮನಿಸಿದಾಗ ಈಜಿಪ್ಟ್, ಮೆಸಪಟೊಮಿಯಾ, ಚೀನಾ ನಾಗರಿಕತೆ ಈ ರೀತಿಯಾದ ನಾಗರಿಕತೆಗಳು

ನದಿ ಬಯಲಿನಲ್ಲಿಯೇ ಉದಯಿಸಿರುವುದು ಕಂಡುಬರುತ್ತದೆ. ಪ್ರಾಗಿತಿಹಾಸ ಕಾಲದಿಂದ ಬೆಳವಣಿಗೆ ಪಡೆದ ಹಂಪಿ ತುಂಗಭದ್ರಾ ನದಿಯ ದಂಡೆಯ ಮೇಲಿದೆ.

ಪ್ರಾಚೀನ ಕಾಲದಲ್ಲಿ ಇದು ಧಾರ್ಮಿಕ ಕ್ಷೇತ್ರವಾಗಿ ಮತ್ತು ವಿಜಯನಗರ ರಾಜ್ಯದ ರಾಜಧಾನಿಯಾಗಿ ಹೆಸರು ಮಾಡಿದೆ. ಈ ಪರಿಸರ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಸತಿ ನೆಲೆಯಾಗಿತ್ತು. ಅಲ್ಲದೆ ರಾಮಾಯಣದ ಕಿಷ್ಕಿಂದವಾಗಿ, ಪಂಪಾ ವಿರೂಪಾಕ್ಷ ಕಲ್ಯಾಣದಿಂದ ಧಾರ್ಮಿಕ ಕೇಂದ್ರವಾಗಿ ಆರಾಧ್ಯ ದೈವವಾಗಿ ಬೆಳವಣಿಗೆ ಪಡೆದಂತೆ ಅನೇಕ ದೇವಾಲಯ ಮೂರ್ತಿಶಿಲ್ಪಗಳ ನಿರ್ಮಾಣಗೊಂಡವು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಾಗಿ ವೈಷ್ಣವ–ಶ್ರೀವೈಷ್ಣವ ಧರ್ಮ ವಿಸ್ತಾರರೂಪ ಪಡೆಯುತಿದ್ದಂತೆ ಅದಕ್ಕೆ ಸಂಬಂಧಿಸಿದ ದೇವಾಲಯಗಳ ನಿರ್ಮಾಣವೂ ನಡೆಯಿತು. ಇನ್ನೊಂದೆಡೆ ಜೈನ ಧರ್ಮದ ಸ್ಮಾರಕಗಳ ನಿರ್ಮಾಣವೂ ನಡೆಯಿತು. ರಾಜಧಾನಿ ಪಟ್ಟಣವಾಗಿ ಕೋಟೆ–ಅರಮನೆ–ವಸತಿ ಗೃಹಗಳು  ಬಜಾರಗಳು ಹೀಗೆ ಅನೇಕ ರೀತಿಯಲ್ಲಿ ಹಂಪಿ ಪರಿಸರ ಅಭಿವೃದ್ಧಿ ಹೊಂದುತ್ತ ಬಂತು.

ವಿಜಯನಗರ ಪೂರ್ವದಲ್ಲಿ ಉತ್ತರ ಭಾರತವು ದೆಹಲಿ ಸುಲ್ತಾನರ ಮತ್ತು ಮೊಘಲರ ಆಳ್ವಿಕೆಯಿಂದ ಕೂಡಿದ್ದಿತು. ದೆಹಲಿ ಸುಲ್ತಾನರಲ್ಲಿ ಪ್ರಧಾನವಾಗಿ ಗುಲಾಮಿ, ಖಿಲ್ಜಿ, ತೊಘಲಕ್, ಸೈಯದ್ ಮತ್ತು ಲೂದಿ ಸಂತತಿಗಳು ಆಳ್ವಿಕೆ ನಡೆಸಿವೆ. ಇವರಲ್ಲಿ ಕುತ್ಬುದ್ದೀನ್ ಐಬಕ್, ಇಲ್ತುಮಿಶ್, ಬಲ್ಬನ್, ಅಲ್ಲಾವುದ್ದೀನ್ ಖಿಲ್ಜಿ, ಮಹಮ್ಮದ್ ಬಿನ್ ತುಘಲಕ್, ಇಬ್ರಾಹಿಂ ಲೂದಿ, ಸಿಕಂದರ್ ಲೂದಿ ಮೊದಲಾದವರ ಹೆಸರುಗಳು ಪ್ರಮುಖವಾಗಿವೆ.

ಕ್ರಿ.ಶ. ೧೨೯೦ರಲ್ಲಿ ಫಿರೋಜ್ ಎಂಬಾತನು ಜಲಾಲುದ್ದೀನ್ ಫಿರೋಜ್ ಷಹಾ ಎಂಬ ಹೆಸರಿನಿಂದ ದೆಹಲಿಯ ಸಿಂಹಾಸರೋಹಣ ಮಾಡುತ್ತಾನೆ. ಆ ನಂತರ ದೇವಗಿರಿ, ವಾರಂಗಲ್, ದ್ವಾರಸಮುದ್ರ, ಮಧುರೆ ಮೇಲೆ ಮಲ್ಲಿಕಾಫರನ ದಾಳಿ ಭಯದ ವಾತಾವರಣವನ್ನು ಸೃಷ್ಟಿಸಿತ್ತು. ಈಗಾಗಲೇ ಭಾರತದಲ್ಲಿ ಆರ್ಯರು, ಪರ್ಷಿಯನ್ನರು, ಹೂಣರು, ಮಂಗೋಲಿಯನ್ನರು, ಗ್ರೀಸರು, ಮಹಮ್ಮದಿಯರು, ಪೋರ್ಚುಗೀಸರು, ಫ್ರೆಂಚರು, ಡಚ್ಚರು ಮತ್ತು ಬ್ರಿಟಿಷರು ಬಂದು ಹೋಗಿರುವುದನ್ನು ತಿಳಿಸುತ್ತದೆ. ನಮ್ಮ ವಿಜಯನಗರ ಕಾಲಕ್ಕೆ ಪೋರ್ಚುಗೀಸರ ಆಗಮನವು ಸಮುದ್ರದ ಸಾರಿಗೆ (ಜಲಸಾರಿಗೆ) ವ್ಯಾಪಾರದ ಮೂಲಕವಾದರೆ, ಅಲ್ಲಾವುದ್ದೀನನು ದಕ್ಷಿಣ ದಂಡಯಾತ್ರೆಯಿಂದ ದಕ್ಷಿಣ ಭಾರತಕ್ಕೆ ಇಸ್ಲಾಮಿನ ಪ್ರವೇಶವಾಗಲು ಕಾರಣವಾಯಿತು. ಇವೆರಡೂ ಸಂಧಿಗ್ದ ಪ್ರಸಂಗಗಳು ಏಕ ಕಾಲಕ್ಕೆ ದಕ್ಷಿಣ ಭಾರತದಲ್ಲಿ ಸಂಭವಿಸಿದವು.

ಹೊಯ್ಸಳ, ಮೌರ್ಯರು, ಶಾತವಾಹನರು, ಗುಪ್ತರು, ಪಲ್ಲವರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಸಾಮ್ರಾಜ್ಯ ಮತ್ತು ವಿಜಯನಗರದ ಅರಸರ ಆಳ್ವಿಕೆಯ ನಂತರ ಈ ಪ್ರದೇಶದಲ್ಲಿ ಷಾಹಿ ಸಾಮ್ರಾಜ್ಯಗಳ ಅರಸರ ಆಳ್ವಿಕೆ ನಡೆಯುತ್ತದೆ.

ಉತ್ತರ ಭಾರತದ ಇತರೆ ಸಾಮ್ರಾಜ್ಯಗಳಂತೆ ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವು ತುಂಗಭದ್ರಾ ನದಿಯ ಬಯಲಿನಲ್ಲಿ ಉದಯಿಸಿತು. ಇದು ವಿಶೇಷವಾಗಿ ಪ್ರಾಚೀನ ಭಾರತದಲ್ಲಿ ಅಂದರೆ ಸಿಂಧೂ ಬಯಲಿನ ನಂತರ ವೈದಿಕ ಧರ್ಮದ ಆಚರಣೆಗಳು ಉದಯಿಸಿದವು. ಆದರೆ ಕಾಲಾನಂತರ ಜೈನ ಧರ್ಮ, ಬೌದ್ಧ ಧರ್ಮದ ಅವಧಿಯಲ್ಲಿ ಅದು ಅಳಿವಿಗೆ ಕಾರಣವಾಯಿತು.

ನಂತರ ಕ್ರಿ.ಪೂ. ೨ನೇ ಶತಮಾನದಿಂದ ಕ್ರಿ.ಶ. ೩ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಶಾತವಾಹನರ ಆಳ್ವಿಕೆಯ ಅವಧಿಯಲ್ಲಿ ಮತ್ತೆ ವೈದಿಕ ಧರ್ಮವು ತಿರುವು ಪಡೆಯಿತು. ನಂತರ ಉತ್ತರ ಭಾರತದಲ್ಲಿ ೪ ಮತ್ತು ೫ನೇ ಶತಮಾನದಲ್ಲಿ ಗುಪ್ತರ ಆಳ್ವಿಕೆಯಲ್ಲಿ ವೈದಿಕ ಧರ್ಮವನ್ನು ರಕ್ಷಣೆ ಮಾಡಿತು. ಆದರೆ ಅರಬ್ಬರ ದಾಳಿಯು ವೈದಿಕ ಧರ್ಮಕ್ಕೆ ಮುಳುವಾಗಿ ಪರಿಣಮಿಸಿತು. ಈ ವೈದಿಕ ಧರ್ಮವು ಅಳಿವಿನ ಅಂಚಿಗೆ ಸರಿಯುತ್ತಿರುವಾಗ ಅದರ ರಕ್ಷಣೆಗಾಗಿ ಉದಯಿಸಿದ ಮಹಾ ಸಾಮ್ರಾಜ್ಯವೇ ವಿಜಯನಗರ ಸಾಮ್ರಾಜ್ಯವಾಗಿದೆ.

ಹಂಪೆಯ ಪರಿಸರವು ಪುರಾತತ್ವ, ಚಾರಿತ್ರಿಕ ಮತ್ತು ಧಾರ್ಮಿಕವಾಗಿ ವೈವಿಧ್ಯಮಯ ಕ್ಷೇತ್ರವಾಗಿರುವುದು ಒಂದು ವಿಸ್ಮಯ. ಇಂದಿಗೂ ಈ ಪರಿಸರದಲ್ಲಿ ಪುರಾತತ್ವ ನಿವೇಶನಗಳನ್ನು ಸರ್ವೇಕ್ಷಣೆ ಮತ್ತು ಉತ್ಖನನ ಮಾಡುತ್ತಿರುವುದು ಕಂಡುಬರುತ್ತದೆ. ಆ ಮೂಲಕ ಹೊಸ ಹೊಸ ಸ್ಮಾರಕ, ಶಿಲ್ಪ, ಶಾಸನ, ನಿವೇಶನಗಳನ್ನು ಬೆಳಕಿಗೆ ತರಲಾಗಿದೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿ ಆಗಿದೆ. ಹೀಗೆ ಉದಯಿಸಿದ ವಿಜಯನಗರ ಸಾಮ್ರಾಜ್ಯವನ್ನು ನಾಲ್ಕು ಮನೆತನಗಳ ಆಳ್ವಿಕೆ ಮಾಡಿದ್ದಾರೆ. ಸಂಗಮ, ಸಾಳ್ವ, ತುಳುವ, ಅರವೀಡು. ಸುಮಾರು ೨೩೦ ವರ್ಷಗಳ ಕಾಲ ವೈಭವಪೂರಿತವಾಗಿ ದಕ್ಷಿಣ ಭಾರತವನ್ನು ಆಳ್ವಿಕೆ ನಡೆಸಿದ ಅರಸರು ದಕ್ಷಿಣ ಭಾರತದ ಪ್ರಸಿದ್ಧ ಸಾಮ್ರಾಜ್ಯವಾಗಿದ್ದಲ್ಲದೆ ಇಡೀ ಕರ್ನಾಟಕವನ್ನೇ ಅಖಂಡವಾಗಿ ಆಳ್ವಿಕೆ ಮಾಡಿದ ಸಾಮ್ರಾಜ್ಯವಿದು. ಕರ್ನಾಟಕದ ಇತಿಹಾಸಕ್ಕೆ ಮಾತ್ರವೇ ಸೀಮಿತವಾಗಿದೆ. ಭಾರತ ಮತ್ತು ಪ್ರಪಂಚ ಇತಿಹಾಸದಲ್ಲಿ ತನ್ನದೆ ಆದ ಮಹತ್ವವನ್ನು ಪಡೆದು ಕಲೆ ಮತ್ತು ವಾಸ್ತುಶಿಲ್ಪಗಳಿಂದ ವಿಶ್ವಪಾರಂಪರಿಕ ತಾಣಗಳಲ್ಲಿ ಒಂದು ಆಗಿದ್ದು ವಿಶೇಷವಾಗಿದೆ. ಇಡೀ ಪ್ರಪಂಚವೇ ತನ್ನ ಕಡೆ ನೋಡುವಂತೆ ವೈಭವಯುತವಾಗಿ ಮೆರೆದ ಈ ಸಾಮ್ರಾಜ್ಯ ಕ್ರಿ.ಶ. ೧೫೬೫ರಲ್ಲಿ ನಡೆದ ರಕ್ಕಸಗಿ–ತಂಗಡಗಿ ಯುದ್ಧದ ನಂತರ ಸಂಪೂರ್ಣವಾಗಿ ವಿಜಯನಗರ ಸಾಮ್ರಾಜ್ಯವು ಷಾಹಿ ರಾಜ್ಯಗಳಿಗೆ ಒಳಪಟ್ಟು ಅವನತಿಯನ್ನು ಹೊಂದಿ ಹಾಳು ಹಂಪೆ ಆಯಿತು.

ಈ ವಿಜಯನಗರ ಸಾಮ್ರಾಜ್ಯದ ವೈಭವದ ಕುರಿತು ಅನೇಕ ಸಂಶೋಧನೆಗಳು ಆಗಿವೆ. ಆದರೆ ರಕ್ಕಸಗಿ–ತಂಗಡಗಿ ಯುದ್ಧದ ಪರಿಣಾಮ, ಕಾರಣಗಳು, ಘಟನೆಗಳು ಕುರಿತು ಅಲ್ಲಲ್ಲಿ ಕೆಲವು ಕೃತಿಗಳು ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ. ಆದರೆ ಇಡಿಯಾಗಿ ರಕ್ಕಸಗಿ–ತಂಗಡಗಿ ಯುದ್ಧದ ನಂತರ ಸ್ಥಿತಿಯ ಕುರಿತು ಒಂದು ಸಂಪೂರ್ಣ ಅಧ್ಯಾಯಗಳು ಆಗದೇ

ಇರುವುದರಿಂದ ಪ್ರಸ್ತುತ ಅಧ್ಯಯನವಾದ "ರಕ್ಕಸಗಿ-ತಂಗಡಗಿ ಯುದ್ಧದ ನಂತರ ಹಂಪಿಯ ಸ್ಥಿತಿಗತಿಗಳು" ಎಂಬ ಶೀರ್ಷಿಕೆಯ ಅಡಿಯಲ್ಲಿ ಇಡೀ ಹಂಪಿಯ ಕುರಿತಾಗಿ ಇತಿಹಾಸ ಮತ್ತು ಪುರಾತತ್ವೀಯ ಅವಶೇಷಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಅಧ್ಯಯನ ಮಾಡಲಾಗುವುದು.

### ೧.೧. ಅಧ್ಯಯನದ ಉದ್ದೇಶ

ಸಾಮಾನ್ಯವಾಗಿ ಯಾವುದೇ ಒಂದು ಅಧ್ಯಯನವು ನಿರ್ದಿಷ್ಟ ಗುರಿಯನ್ನು ಹೊಂದಿದ್ದರೆ ಮಾತ್ರ ಅದು ಅಧ್ಯಯನವಾಗಲು ಸಾಧ್ಯವಾಗುತ್ತದೆ.

ಹಂಪೆಯು ಅತ್ಯುನ್ನತವಾದ ಪರಿಸರ ಸಂಪತನ್ನು ಹೊಂದಿರುವ ಪ್ರಮುಖ ಸ್ಥಳವಾಗಿದೆ. ಹಂಪೆಯ ಸ್ಥಿತಿಗತಿಗಳು ವಿಜಯನಗರ ಸಾಮ್ರಾಟರು ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಕ್ರಿ.ಶ. ೧೫೬೫ರಲ್ಲಿ ಶಾಹಿ ಸುಲ್ತಾನರು ಮತ್ತು ವಿಜಯನಗರ ಮಧ್ಯೆ ರಕ್ಕಸಗಿ-ತಂಗಡಗಿ ಎಂಬಲ್ಲಿ ಯುದ್ಧ ನಡೆದು ವಿಜಯನಗರ ಸೈನ್ಯಕ್ಕೆ ಸೋಲುಂಟಾಯಿತು. ಇಡೀ ರಾಜ್ಯ ಹಾಗೂ ರಾಜಧಾನಿಯ ಮೇಲೆ ಪರಿಣಾಮಗಳನ್ನು ಉಂಟುಮಾಡಿತು. ರಾಜ್ಯದ ಅಲ್ಲೆಲ್ಲ ಅನೇಕ ಪಾಳೆಪಟ್ಟುಗಳು (ಪಾಳೆಗಾರರು) ಸ್ವತಂತ್ರವಾದರೆ ರಾಜಧಾನಿಯಾಗಿದ್ದ ಹಂಪಿ ವಾರಸುದಾರರಿಲ್ಲದೆ ಅವನತಿಯ ಸ್ಥಿತಿಗೆ ತಲುಪಿತು. ೧೮೯೯ನೇ ಶತಮಾನದಲ್ಲಿ ಅಧ್ಯಯನಕಾರರ ಗಮನ ಹಂಪಿಯ ಕಡೆಗೆ ಸೆಳೆದು ಭಾರತೀಯ ಪುರಾತತ್ವ ಶಾಖೆಯ ಮೂಲಕ ಅಭಿವೃದ್ಧಿ ಕಾರ್ಯಗಳು ನಡೆದವು. ಇದರಿಂದ ಕ್ರಮೇಣ ಹಂಪಿ ಅದರ ಸುತ್ತಮುತ್ತಲಿನ ಪರಿಸರ ಪ್ರವಾಸಿಗರ ಸಂಖ್ಯೆಯನ್ನು ಹೆಚ್ಚಿಸಿತು.

ಕ್ರಿ.ಶ. ೧೫೬೫ ಇತ್ತೀಚಿನವರೆಗೆ ಹಂಪಿಯಲ್ಲಿ ನಡೆದ ಚಟುವಟಿಕೆಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಹಂಪಿ ಪರಿಸರಕ್ಕೆ ಸಂಬಂಧಿಸಿದಂತೆ ಅನೇಕ ವಿದ್ವಾಂಸರು ಅಲ್ಲಲ್ಲಿ ಲೇಖನಗಳ ಮೂಲಕ ಹಂಪಿಯ ಸ್ಥಿತಿಗತಿಗಳ ಬಗ್ಗೆ ಚರಿತ್ರೆಯನ್ನು ಹೊರತರುವ ಪ್ರಯತ್ನ ಮಾಡಿದ್ದಾರೆ. ಆದರೆ ಈ ಅಧ್ಯಯನಗಳಿಂದ ಈವರೆಗೆ ನಡೆದ ಪ್ರಸ್ತುತ ಘಟನಾವಳಿಗಳ ಕುರಿತು ಒಂದು ಇಡಿಯಾದ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನಕ್ಕೆ "ರಕ್ಕಸಗಿ-ತಂಗಡಗಿಯ ಯುದ್ಧದ ನಂತರ ಹಂಪಿಯ ಸ್ಥಿತಿಗತಿಗಳು" ಎಂಬ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಒಂದು ಅಧ್ಯಯನ ಇಲ್ಲವೆ ಸಂಶೋಧನೆ ಯಶಸ್ವಿಯಾಗಬೇಕೆಂದರೆ ಅದಕ್ಕೊಂದು ನಿರ್ದಿಷ್ಟ ಚೌಕಟ್ಟು ಇಲ್ಲವೆ ವ್ಯಾಪ್ತಿ ಇರಬೇಕಾಗುತ್ತದೆ. ಪ್ರಸ್ತುತ ಅಧ್ಯಯನವು ಭೌಗೋಳಿಕ ಹಾಗೂ ವಿಷಯ ವ್ಯಾಪ್ತಿಗೆ ಒಳಪಡಿಸಲಾಗಿದೆ. ಹಂಪಿಯ ೧೫೬೫ರಿಂದ ನಂತರ ಸ್ಥಿತಿಗತಿಗಳ ಬಗ್ಗೆ

ಸೂಚ್ಯವಾಗಿ ತಿಳಿಸಲಾಗಿದೆ. ಇಲ್ಲಿ ಹಂಪಿಯು ವಿಶ್ವಪರಂಪರೆ ತಾಣ ಎಂದು ಘೋಷಿಸಿರುವ ೨೩.೨ ಚದುರ ಕಿ.ಮೀ. ಪ್ರದೇಶ ಈ ಸಮೀತಿ ಪ್ರದೇಶವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಂಪಿ, ಕಮಲಾಪುರ, ಮಲಪನಗುಡಿ, ಆನೆಗುಂದಿ, ತಳವಾರಘಟ್ಟ, ಪುರಂದರ ಮಂಟಪ, ವಿರುಪಾಪುರ ಗಡ್ಡಿ, ಕಡ್ಡಿರಾಂಪುರ ಇನ್ನೂ ನೆರೆಹೊರೆಯ ಇತರ ಹಳ್ಳಿಗಳನ್ನು ಆಂಶಿಕವಾಗಿ ಆಯಾಯ ವಿಷಯದ ಸಂದರ್ಭದಲ್ಲಿ ಬಳಸಿಕೊಳ್ಳಲಾಗುವುದು.

ಶೀರ್ಷಿಕೆಯಲ್ಲಿ ಹೇಳಿರುವಂತೆ ಪ್ರಸ್ತುತ ಅಧ್ಯಯನವು ರಕ್ಕಸಗಿ ತಂಗಡಗಿ ಯುದ್ಧದ ನಂತರ ಹಂಪಿಯ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಹಂಪಿ ಹಾಗೂ ಅದರ ಸುತ್ತಮುತ್ತಲಿನ ಪರಿಸರವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೧.೩. ಅಧ್ಯಯನದ ವಿಧಾನ

ಒಂದು ಸಂಶೋಧನ ಪ್ರಬಂಧವನ್ನು ರಚಿಸುವಲ್ಲಿ ಪೂರ್ವಯೋಜಿತ ಅಧ್ಯಯನ ಕ್ರಮವನ್ನು ಅನುಸರಿಸುವುದು ಅತೀ ಮುಖ್ಯ. ಇದು ಆ ಆಧ್ಯಯನವನ್ನು ವ್ಯವಸ್ಥಿತವಾಗಿ ಹಾಗೂ ಸುಲಭವಾಗಿ ಕಟ್ಟಿಕೊಡುವಲ್ಲಿ ಸಹಾಯವಾಗುತ್ತದೆ. ಒಂದರ್ಥದಲ್ಲಿ ಹೇಳುವುದಾದರೆ ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನವು "ರಕ್ಕಸಗಿ–ತಂಗಡಗಿ ಯುದ್ಧದ ನಂತರ ಹಂಪಿಯ ಸ್ಥಿತಿಗತಿಗಳು" ಎಂಬ ಶೀರ್ಷಿಕೆಯನ್ನು ಹೊಂದಿದ್ದು ಈ ಮುಂದಿನ ಅಧ್ಯಯನ ಕ್ರಮವನ್ನು ಅನುಸರಿಸಲಾಗಿದೆ.

ಮೊದಲಿಗೆ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿಯನ್ನು ತಯಾರಿಸಿ ಆಕಾರಾದಿಯಾಗಿ ಜೋಡಿಸಿಕೊಳ್ಳಲಾಯಿತು. ಪ್ರಸ್ತುತ ವಿಷಯಕ್ಕೆ ಕ್ಷೇತ್ರಕಾರ್ಯದಲ್ಲಿ ದೊರೆಯುವ ಹಂಪಿಯು ಪ್ರಾಥಮಿಕ ಆಕರಗಳಾಗಿದ್ದು, ವ್ಯವಸ್ಥಿತವಾದ ಪೂರ್ವಯೋಜಿತ ವಿಧಾನವನ್ನು ಅನುಸರಿಸಿ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಇಲ್ಲಿ ಅನುಸರಿಸಿದ ವಿಧಾನವೆಂದರೆ, ಹಂಪಿಯಲ್ಲಿರುವ ಪ್ರತಿಯೊಂದು ಸ್ಥಳಗಳು, ಸ್ಮಾರಕಗಳು, ಶಾಸನಗಳು, ದೇವಾಲಯಗಳನ್ನು, ಛಾಯಾಚಿತ್ರಗಳನ್ನು ಗಣಕಯಂತ್ರದ ಸಹಾಯದಿಂದ ವಿಂಗಡಿಸಿ ಒಂದೆಡೆ ಕ್ರೋಢೀಕರಿಸಿಕೊಂಡು ಅವುಗಳ ವಿವರಗಳನ್ನು ಈ ಅಧ್ಯಯನದಲ್ಲಿ ನೀಡಲಾಗಿದೆ.

ಈ ವಿಧಾನವನ್ನು ಅನುಸರಿಸುವ ಮೂಲಕ ಹಂಪಿ ಪರಿಸರದ ಭೌಗೋಳಿಕ, ಪುರಾತತ್ವೀಯ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕ್ಷೇತ್ರಕಾರ್ಯ ಮೂಲಕ ದಾಖಲಿಸಿಕೊಳ್ಳುವುದು ಇದಕ್ಕೆ ಪೂರಕವಾಗಿ ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ವಿಮರ್ಶೆಗೆ ಒಳಪಡಿಸಿ ವಿಶ್ಲೇಷಿಸಿ ಪ್ರಬಂಧವನ್ನು ರಚಿಸಲಾಗಿದೆ.

## ೧.೪. ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗನ್ನಾಗಿ ವಿಂಗಡಿಸಿಕೊಂಡಿದ್ದು ಅದರ ಸ್ವರೂಪ ಈ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಹಾಗೂ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಪರಿಸರ, ಐತಿಹಾಸಿಕ ಹಿನ್ನೆಲೆ, ಪ್ರಾಗಿತಿಹಾಸ ಕಾಲ ಚಾರಿತ್ರಿಕ ಹಿನ್ನೆಲೆ ಕುರಿತು ವಿಶ್ಲೇಷಿಸಲಾಗುವುದು.

ಮೂರನೆಯ ಅಧ್ಯಾಯದಲ್ಲಿ ರಕ್ಕಸಗಿ–ತಂಗಡಗಿ ಕಾಳಗದ ಪರಿಣಾಮ, ಕಾರಣ, ಘಟನೆಗಳ ಕುರಿತು ಅಲ್ಲಿ ದೊರೆತಂತಹ ಶಾಸನ, ದೇವಾಲಯ, ಕೋಟೆ ಇನ್ನಿತರ ಅವಶೇಷಗಳನ್ನು ಕ್ಷೇತ್ರಕಾರ್ಯದ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಪ್ರಮುಖ ಅಧ್ಯಾಯವಾಗಿದೆ. ಇದು ಸಂಪೂರ್ಣ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಹಂಪಿಯ ವ್ಯಾಪ್ತಿಯಲ್ಲಿ ಬರುವ ಐತಿಹ್ಯಗಳು, ಸ್ಥಳೀಯ ಆಕರಗಳು ಹಾಗೂ ವಿದೇಶಿಯರ ಹೇಳಿಕೆಗಳು, ದೇವಾಲಯಗಳ ಹಿನ್ನೆಲೆಯಲ್ಲಿ ಪ್ರತಿಮಾ ಲಕ್ಷಣಗಳನ್ನು ಉಲ್ಲೇಖಿಸುವುದರ ಮೂಲಕ ಛಾಯಾಚಿತ್ರಗಳೊಂದಿಗೆ ಒರೆಹಚ್ಚಲಾಗಿದೆ. ಹಾಗೆಯೇ ಹಂಪಿಯ ಪ್ರದೇಶದಲ್ಲಿ ಇಲ್ಲಿಯವರೆಗೆ ಕಂಡುಬರುವ ಎಲ್ಲಾ ವಿಷಯಗಳ ಬಗ್ಗೆ ಅವಲೋಕಿಸಿ ವಿವರಿಸಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು ಇದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳ ಸಂಕ್ಷಿಪ್ತರೂಪವಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ ಪ್ರೌಢ ಪ್ರಬಂಧ ಮುಂತಾದ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗುವುದು. ಅಧ್ಯಯನಕ್ಕೆ ಸಂಬಂಧಿಸಿದಂತೆ ಛಾಯಾಚಿತ್ರಗಳು, ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಸೇರಿಸಲಾಗುವುದು.

## ೧.೫. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಹಂಪೆಯು ನಿಸರ್ಗದತ್ತವಾಗಿ ಪಡೆದಿರುವ ಚೆಲುವಿನಿಂದ ಒಂದು ಪ್ರೇಕ್ಷಣೀಯ ಸ್ಥಳವಾಗಿದೆ. ಇಂದಿಗೂ ಅದರ ವೈಭವೀಕರಣವು ಹಾಳು ಹಂಪೆಯಾಗಿ ನಿಂತಿದೆ. ಹಾಗೂ ಪ್ರಾಚೀನ ದೇವಾಲಯಗಳು ಮತ್ತು ಇತರ ಸ್ಮಾರಕಗಳಿಂದಾಗಿ ವಿಶ್ವಪರಂಪರೆಯ ಐತಿಹಾಸಿಕ ತಾಣವೆಂದು ಗುರುತಿಸಲ್ಪಟ್ಟ ಇದು ಇಂದಿಗೂ ಸಂಶೋಧನಾಕಾರರಿಗೆ ಕುತೂಹಲ ಪ್ರದೇಶವೆನಿಸಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಭೇಟಿ ನೀಡಿ ಹಲವು ವಿದ್ವಾಂಸರು ಇಲ್ಲಿಯ ಪ್ರಾಚೀನತೆ ಸಾಮ್ರಾಜ್ಯದ

ಉದಯ, ಸ್ಥಳೀಯ ಆಡಳಿತ, ರಾಜಕೀಯ ಚರಿತ್ರೆ, ಆರ್ಥಿಕತೆ, ಸಾಮಾಜಿಕ ಜೀವನ, ಧರ್ಮ ಮತ್ತು ದೇವಾಲಯಗಳು, ಯುದ್ಧದ ನೀತಿಗಳು ಹೀಗೆ ಹಲವು ವಿಷಯಗಳ ಕುರಿತು ಅಧ್ಯಯನ ನಡೆಸಿ ತಮ್ಮ ಅಭಿಪ್ರಾಯಗಳನ್ನು, ತಮ್ಮ ಕೃತಿಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಹಂಪಿಯ ಕುರಿತು ಕೆಲವು ಅಧ್ಯಯನಗಳು ನಡೆದಿವೆ. ರಕ್ಕಸಗಿ-ತಂಗಡಗಿ/ತಾಳಿಕೋಟೆ ನಿರ್ಣಾಯಕ ಯುದ್ಧ ಮತ್ತು ಈ ರಣಭೂಮಿಯನ್ನು ಶೋಧಿಸುವ ಹಾಗೂ ನಿರ್ಣಯಿಸುವ ಕೆಲಸವನ್ನು ಕಳೆದ ಶತಮಾನದಲ್ಲಿ ಅನೇಕ ವಿದ್ವಾಂಸರಾದವರು ನಿರ್ವಹಿಸಲೆತ್ನಿಸಿದ್ದಾರೆ. ಎಸ್.ಬಿ. ಕೋಡದ ಅವರು ೧೯೯೯ರಲ್ಲಿ "ತಾಳಿಕೋಟೆ ಯುದ್ಧ" ಎಂಬ ಪ್ರತ್ಯೇಕ ಪುಸ್ತಕವನ್ನು ಹೊರತಂದಿದ್ದಾರೆ. ಮುಖ್ಯವಾಗಿ ಡಾ. ಆನಂದ ಜೆ. ಕುಲಕರ್ಣಿ ಅವರು "ತಾಳಿಕೋಟೆ ಯುದ್ಧ: ಒಂದು ಅಧ್ಯಯನ" ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ೨೦೦೦ರಲ್ಲಿ ರಚಿಸಿ, ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಆದರೆ ವಿಜಯನಗರದ ಅಂತಿಮ ಯುದ್ಧದ ಕುರಿತು ಡಾ. ಆನಂದ ಜೆ. ಕುಲಕರ್ಣಿಯವರು ವ್ಯಾಪಕ ಕ್ಷೇತ್ರಕಾರ್ಯ ನಡೆಸಿ ಹಲವಾರು ವಿಚಾರಾರ್ಹ ಅಂಶಗಳತ್ತ ವಿದ್ವಾಂಸರ ಗಮನ ಸೆಳೆಯುವ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ್ ಹಂಪಿ ಪರಿಸರದ ಭೌಗೋಳಿಕ ಹಾಗೂ ಚಾರಿತ್ರಿಕ ಮಾಹಿತಿಗಳನ್ನು ಒಳಗೊಂಡಿದೆ.

ಕೆ.ಬಿ. ಶಿವತಾರಕ ಅವರ "ಕರ್ನಾಟಕದ ಪುರಾತತ್ವ ನೆಲೆಗಳು" ಕೃತಿಯಲ್ಲಿ ಹಂಪಿಯ ಪ್ರಾಗಿತಿಹಾಸದ ಹಳೆ ಶಿಲಾಯುಗ ನೆಲೆಗಳು, ಬೃಹತ್ ಶಿಲಾಯುಗದ ನೆಲೆಗಳು ಇತಿಹಾಸ ಆರಂಭ ಯುಗದ ನೆಲೆಗಳಲ್ಲಿ ದೊರೆತ ಅವಶೇಷಗಳ ಕುರಿತು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

ಕೂ.ಸ. ಅಪರ್ಣರವರ (೧೯೯೯) "ದೇವಾಲಯ ವಾಸ್ತುಶಿಲ್ಪ ಪರಿಚಯ" ಕೃತಿಯು ಸಾಮಾನ್ಯ ಜನಕ್ಕೆ ತಿಳಿಯುವಂತೆ ದೇವಾಲಯ ಮತ್ತು ಅದರ ಭಾಗಗಳನ್ನು ಪರಿಚಯಿಸುತ್ತದೆ.

ಆದರೆ ರಾಮರಾಜನ ಬಖೈರನ್ನು ವಿಶೇಷವಾಗಿ ಗಮನಿಸಿ ಕನ್ನಡದಲ್ಲಿ ಬರವಣಿಗೆ ಮಾಡಿದವರು ನಾ.ಶ್ರೀ. ರಾಜಪುರೋಹಿತರಂಥಾ ಸಂಶೋಧಕರು ಮಾತ್ರ. ಈ ನಿಟ್ಟಿನಲ್ಲಿ "ರಾಮರಾಜನ ಬಖೈರು ಪುನರಾವಲೋಕನ" ಎಂಬ ನನ್ನ ಸಂಪ್ರಬಂಧವೊಂದು ಪ್ರಕಟಗೊಂಡಿದೆ. (ಕನ್ನಡ ಅಧ್ಯಯನ ೫.೨.೧೯೯೯) ಇವುಗಳ ವಿನಾ ಪ್ರಸ್ತುತ ಬಖೈರು ಬೇರಾರಿಂದಲೂ ಪ್ರತ್ಯೇಕ ಅಧ್ಯಯನಕ್ಕೊಳಪಟ್ಟುದು ಕಂಡುಬರಲಿಲ್ಲ. ಆದರೆ ರಕ್ಕಸಗಿ-ತಂಗಡಗಿ/ತಾಳಿಕೋಟೆ ರಣಭೂಮಿಯ ನಿರ್ಣಯ ಹಾಗೂ ಅಳಿಯ ರಾಮರಾಯನ ಅಂತ್ಯ ಈ ಎರಡೂ ಅಂಶಗಳ ಬಗೆಗೆ ನಾ.ಶ್ರೀ. ರಾಜಪುರೋಹಿತರೂ ಸೇರಿದಂತೆ ಡಾ. ಅ. ಸುಂದರ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ವಾಸುದೇವ ಬಡಿಗೇರ ಇಂಥಾ ವಿದ್ವಾಂಸರು ಆಳವಾದ ಅಧ್ಯಯನ ನಡೆಸಿ, ಬರಹಗಳನ್ನು ಪ್ರಕಟಿಸಿದ್ದಾರೆ. ಡಾ. ಸುಮದರ ಮತ್ತು ಡಾ. ಕುಲಕರ್ಣಿಯವರು ರಾಮರಾಜನ

ಬಖೈರನ್ನು ತಮ್ಮ ಬರವಣಿಗೆಗಳಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡಿದ್ದು, ಅದನ್ನು ತಕ್ಕಮಟ್ಟಿಗೆ ವಿಮರ್ಶಿಸಲು ಪ್ರಯತ್ನಿಸಿದ್ದಾರೆ. ಸದ್ಯಕ್ಕೆ ಇವು ಬಂದಿರುವ ಬರಹಗಳು ಮಾತ್ರ. ಈ ಮೇಲಿನ ಅಧ್ಯಯನಗಳ ಸಮೀಕ್ಷೆಯ ಹಿನ್ನೆಲೆಯಲ್ಲಿ "ರಕ್ಕಸಗಿ-ತಂಗಡಗಿ ಕಾಳಗದ ನಂತರ ಹಂಪಿಯ ಸ್ಥಿತಿಗತಿ, ಇತಿಹಾಸ ಮತ್ತು ಪುರಾತತ್ವ" ಎಂಬ ವಿಷಯವನ್ನು ಪ್ರತ್ಯೇಕ ಅಧ್ಯಯನದ ಮೂಲಕ ಅಗತ್ಯವನ್ನು ಅರಿತು ಪ್ರಬಂಧ ಸಿದ್ಧಪಡಿಸಲಾಗಿದೆ.

# ಅಧ್ಯಾಯ : ಎರಡು

## ಭೌಗೋಳಿಕ ಹಾಗೂ ಐತಿಹಾಸಿಕ ಹಿನ್ನೆಲೆಗಳು

## ಅಧ್ಯಾಯ: ಎರಡು

# ಭೌಗೋಳಿಕ ಹಾಗೂ ಐತಿಹಾಸಿಕ ಹಿನ್ನೆಲೆಗಳು

ಈ ಹಂಪಿ ಪರಿಸರವು ಪ್ರಾಗೈತಿಹಾಸಿಕ ಯುಗದಲ್ಲಿಂದಲೂ ಜನರು ಇಲ್ಲಿ ವಾಸ ಮಾಡುತ್ತಿದ್ದರೆಂದು ಇಲ್ಲಿ ನಡೆಸಿದ ಹಲವಾರು ಉತ್ಖನನಗಳಿಂದ ತಿಳಿದುಬರುತ್ತದೆ. ಹಂಪಿ ಪರಿಸರ ಎಂದರೆ ಹಂಪಿ ಕೇಂದ್ರ ಸ್ಥಳದಿಂದ ೬೦ ಕೀ.ಮಿ. ವ್ಯಾಪ್ತಿಗೆ ಈ ಪ್ರಸ್ತುತ ಅಧ್ಯಯನವನ್ನು ಒಳಗೊಂಡಿಂದೆ.[೧] ಹಂಪಿ ಪರಿಸರದಲ್ಲಿ ಪ್ರಪ್ರಥಮವಾಗಿ ಕರ್ನಾಟಕದಲ್ಲಿ ಆಳ್ವಿಕೆ ಮಾಡಿರುವುದು ಕ್ರಿ.ಪೂ. ೨ನೇ ಶತಮಾನದಲ್ಲಿ ಅದು ಉತ್ತರ ಭಾರತದಲ್ಲಿ ಪ್ರತಿಷ್ಠಿತ ಸಾಮ್ರಾಜ್ಯವಾದ ಮೌರ್ಯರು ಕರ್ನಾಟಕದಲ್ಲಿ ತಮ್ಮ ಪ್ರಾಂತೀಯ ಆಡಳಿತವನ್ನು ಆರಂಭಿಸಿದರು. ಈ ಸಮಯದಲ್ಲಿ ನೈಸರ್ಗಿಕ ಸಂಪತ್ತಿನಿಂದ ಕೂಡಿದ ಹಂಪಿ ಪರಿಸರದ ಕಡೆ ಗಮನ ಹರಿಸಿದರು. ಮೌರ್ಯರ ಕಾಲದಲ್ಲಿ ಹಂಪಿ ಒಂದು ವ್ಯಾಪಾರ ವಾಣಿಜ್ಯ ಕೇಂದ್ರವಾಗಿ ಬೆಳೆಯುವುದರ ಜೊತೆಗೆ ದಕ್ಷಿಣ ಭಾರತದ ಮೌರ್ಯರ ಕಾಲದ ನಗರೀಕರಣದ ಪ್ರಮುಖ ಸ್ಥಳವಾಗಿ ಬೆಳೆದಿರುವುದರಿಂದ ಹಂಪಿ ಪರಿಸರದ ಇತಿಹಾಸವು ಮೌರ್ಯರ ಕಾಲದಲ್ಲಿಯೇ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ಮೌರ್ಯರ ನಂತರ ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಶಾತವಾಹನರು, ಕದಂಬರು, ಗಂಗರು, ಬಾದಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಹಾಗೂ ಹೊಯ್ಸಳರು ಹೀಗೆ ಹಲವಾರು ಅರಸು ಮನೆತನಗಳ ಕಾಲದಲ್ಲಿಯು ಒಂದು ಐತಿಹಾಸಿಕ ತಾಣವಾಗಿ ಹಂಪೆಯು ಬಿಂಬಿಸಿಕೊಂಡಿದೆ.

ಭಾರತದ ಸನಾತನ ಧರ್ಮವಾದ ವೈದಿಕ ಧರ್ಮವು ಉತ್ತರ ಭಾರತದಲ್ಲಿ ಹಿಂದೂ ಜನರ ಆಚಾರ-ವಿಚಾರಗಳಿಂದ ಉದಯಿಸಿ ಕ್ರಿ.ಪೂ. ೫ ಮತ್ತು ೬ನೇ ಶತಮಾನದಲ್ಲಿ ಜೈನ ಹಾಗೂ ಬೌದ್ಧ ಧರ್ಮಗಳ ಉದಯದಿಂದ ಹಿನ್ನಡೆ ಅನುಭವಿಸಿತು. ನಂತರ ಗುಪ್ತರ ಕಾಲದಲ್ಲಿ ಸ್ವಲ್ಪಮಟ್ಟದ ಸುಧಾರಣೆಯನ್ನು ಉತ್ತರ ಭಾರತದಲ್ಲಿ ಕಂಡರು ಅದು ದೇಶದ ತುಂಬೆಲ್ಲ ವಿಸ್ತರಿಸುವಲ್ಲಿ ವಿಫಲವಾಯಿತು. ವೈದಿಕ ಧರ್ಮವು ಉತ್ತರ ಭಾರತಕ್ಕೆ ಮಾತ್ರ ಸೀಮಿತವಾಯಿತು. ತದನಂತರ ಕ್ರಿ.ಶ. ೧೩ ಮತ್ತು ೧೪ ನೇ ಶತಮಾನದಲ್ಲಿ ಮುಸ್ಲಿಂರು ಭಾರತದಲ್ಲಿ ಅಧಿಕಾರವನ್ನು

ಪಡೆದಂತಹ ಸಂದರ್ಭದಲ್ಲಿ ಕ್ರಿ.ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾಯಿತು.[೨] ಈ ಸಾಮ್ರಾಜ್ಯವು ಕರ್ನಾಟಕ ಮಾತ್ರವಲ್ಲ ದೇಶ ವಿದೇಶಗಳಲ್ಲೂ ಒಂದು ಬೃಹತ್ ಸಾಮ್ರಾಜ್ಯವೆಂದು ಸಾರಿತು. ಇದು ಪ್ರಾಚೀನ ಕಾಲದಲ್ಲಿನ ಭಾರತದ ಹಿಂದೂ ಸಂಪ್ರದಾಯವನ್ನು ಅನುಸರಿಸುವ ಮತ್ತು ಅದರ ರಕ್ಷಣೆಗಾಗಿ ಉದಯಿಸಿದ ಮನೆತನವು ಸಾಮ್ರಾಜ್ಯವಾಗಿ ಬೆಳೆದು ಕರ್ನಾಟಕ ಹಾಗೂ ಭಾರತದ ಇತಿಹಾಸಕ್ಕೆ ತಮ್ಮದೆ ಆದ ಕೊಡುಗೆಯನ್ನು ನೀಡಿದ್ದಾರೆ.

ವಿಶೇಷವಾಗಿ ಈ ವಿಜಯನಗರ ಸಾಮ್ರಾಜ್ಯದಲ್ಲಿ ೪ ಪ್ರಮುಖ ರಾಜಮನೆತನಗಳು ಆಳ್ವಿಕೆ ಮಾಡಿದವು. ಅವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿವೆ. ಆ ರಾಜಮನೆತನಗಳು ಎಂದರೆ ಸಂಗಮ, ಸಾಳ್ವ, ತುಳುವ, ಹಾಗೂ ಅರವೀಡು ರಾಜಮನೆತನಗಳು ಬಹಳ ವಿಜೃಂಭಣೆಯಿಂದ ಕರ್ನಾಟಕ ಮಾತ್ರವಲ್ಲದೆ ಭಾರತ ಮತ್ತು ವಿದೇಶಗಳಲ್ಲಿಯು ತಮ್ಮದೆ ಆದಂತಹ ಕೊಡುಗೆಯನ್ನು ನೀಡಿರುವುದರಿಂದ ಅತ್ಯಂತ ಪ್ರತಿಷ್ಠೆಯನ್ನು ಹೊಂದಿದ ರಾಜಮನೆತನಗಳು ಎನಿಸಿಕೊಡಿವೆ.[೩] ಸಂಗಮ, ಸಾಳ್ವ, ತುಳುವ ರಾಜಮನೆತನಗಳು ಆದರೆ ಅರವೀಡು ರಾಜಮನೆತನವು ವಿಜಯನಗರ ಸಾಮ್ರಾಜ್ಯವು ಬಹಳ ವೈಭವಯುತವಾಗಿ ಮೆರೆದಿದ್ದು ಕ್ರಿ.ಶ. ೧೫೬೫ ರಲ್ಲಿ ರಕ್ಕಸಗಿ ತಂಗಡಗಿ ಯುದ್ದದ ನಂತರ ೫ ಷಾಹಿ ರಾಜ್ಯಗಳಿಂದ ಸೋತ ನಂತರ ಉದಯಿಸಿದ ರಾಜಮನೆತನವು ಸಹ ತನ್ನದೆ ಆದ ಕೊಡುಗೆ ಹಂಪಿ ಪರಿಸರಕ್ಕೆ ಅಥವಾ ವಿಜಯನಗರ ಸಾಮ್ಯಾಜ್ಯಕ್ಕೆ ನೀಡಿದ ಅತ್ಯಂತ ಮಹತ್ವದ್ದು ಆಗಿದೆ[೪] ಎಂದು ತಿಳಿದು ಬರುತ್ತದೆ. ಈ ರೀತಿಯಾದ ಅಂಶಗಳಿಂದ ಹಂಪಿ ಪರಿಸರವು ಪ್ರಾಚೀನ ಕಾಲದಷ್ಟೇ, ಮಧ್ಯಕಾಲದಲ್ಲಿ, ಆಧುನಿಕ ಯುಗ ಹಾಗೂ ಪ್ರಸ್ತುತದಲ್ಲಿಯೂ ಕರ್ನಾಟಕದ ಇತರೆ ಐತಿಹಾಸಿಕ ಹಿನ್ನಲೆಯನ್ನು ಹಂಪಿ ಪರಿಸರವು ಹೊಂದಿದೆ. ಈ ಕಾರಣದಿಂದಾಗಿ ಪ್ರಸ್ತುತ ನನ್ನ ಅಧ್ಯಯನವನ್ನು "ರಕ್ಕಸಗಿ ತಂಗಡಗಿ ಯುದ್ದದ ನಂತರ ಹಂಪಿಯ ಸ್ಥಿತಿಗತಿ" ಎಂಬ ಶೀರ್ಷಿಕೆಯ ಮೂಲಕ ಕೆಲವು ವಿಶೇಷ ಮಾಹಿತಿಗಳನ್ನು ಸಂಗ್ರಹಿಸುವ ಹಾಗೂ ಐತಿಹಾಸಿಕ ವಿಷಯವನ್ನು ಒಂದು ಕಡೆ ತರುವ ಪ್ರಯತ್ನ ಮಾಡಲಾಗಿದೆ.

### ೨.೧. ಐತಿಹಾಸಿಕ ಹಿನ್ನೆಲೆ

ಐತಿಹ್ಯದ ಪ್ರಕಾರ ವಿಜಯನಗರ ಸಾಮ್ರಾಜ್ಯಕ್ಕೂ ಮುನ್ನ ಪಂಪಾಕ್ಷೇತ್ರವೆಂಬ ಒಂದು ಪಟ್ಟಣವಿತ್ತು. ಪಂಪಾಮಹಾತ್ಮೆಯಲ್ಲಿ ಹಂಪಿಯ ಪರಿಸರ ಹಾಗೂ ಕ್ಷೇತ್ರ ಮಹಿಮೆಯನ್ನು ಸಾರಾಗವಾಗಿ ಚಿತ್ರಿಸಲಾಗಿದೆ. ಹೇಮಕೂಟದ ಉತ್ತರಕ್ಕಿರುವ ವಿಪ್ರಕೂಟವೆಂಬ ಪರ್ವತದ ಬಳಿಯ ಸರೋವರದ (ಪಂಪಾ ಸರೋವರ) ದಡದಲ್ಲಿ ಪಂಪಾದೇವಿಯ ತಪಸ್ಸನ್ನಾಚರಿಸಿ ಶಿವನನ್ನು ಮದುವೆಯಾಗುತ್ತಾಳೆ ಅನಂತರ ಇದು ಪಂಪಾದೇವಿ ಪಂಪಾವತಿ, ಪಂಪಾಕ್ಷೇತ್ರ, ವಿರೂಪಾಕ್ಷ ಮಹಾಕ್ಷೇತ್ರ, ಕಿಷ್ಕಿಂದ ಎಂಬ ಹೆಸರುಗಳಿಂದ ವಿಜಯನಗರ ಸ್ಥಾಪನೆಯ ಮುಂಚಿನಿಂದಲು ಐತಿಹಾಸಿಕ ಖ್ಯಾತಿಯನ್ನು ಹೊಂದಿದ ಸ್ಥಳವು ಹಂಪೆಯಾಗಿದೆ.

## ೨.೨. ಭೌಗೋಳಿಕ ಪರಿಸರ

ಮಾನವನ ಉಗಮ, ವಿಕಾಸ ಹಾಗೂ ಅಭಿವೃದ್ಧಿಯಲ್ಲಿ ಪರಿಸರ ಗಮನಾರ್ಹ ಪಾತ್ರವಹಿಸಿದೆ. ಅಷ್ಟೇ ಅಲ್ಲದೆ ಇಡಿ ಜೀವ ಸಂಕುಲದ ಉಳಿವು ಅಲ್ಲಿನ ಪರಿಸರವನ್ನು ಅವಲಂಬಿಸಿರುತ್ತದೆ ಎಂಬುದನ್ನು ನಾವು ಅಲ್ಲಗಳೆಯುವಂತಿಲ್ಲ. ರಾಜ ಮಹಾರಾಜರ ಕೀರ್ತಿ, ಪತಾಕೆ, ರಾಜ್ಯಗಳ ಅಳಿವು ಉಳಿವು ಸಹ ಅಲ್ಲಿನ ಬೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ ಎಂಬುದು ಅದರ ಮಹತ್ವವನ್ನು ಎತ್ತಿ ತೋರಿಸುತ್ತದೆ.

ಹಂಪಿ ಪರಿಸರದಲ್ಲಿ ಮಾನವನು ಪ್ರಾಗೈತಿಹಾಸಿಕ ಕಾಲದಿಂದಲೂ ಅನೇಕ ಬದಲಾವಣೆ ಗಳೊಂದಿಗೆ ನಾಗರಿಕತೆಯತ್ತ ಸಾಗಲು ಮುಂದೆ ಒಂದು ಬೃಹತ್ ಸಾಮ್ರಾಜ್ಯವಾಗಿ ಬೆಳೆಯಲು ಇಲ್ಲಿನ ಸುತ್ತಮುತ್ತಲಿನ ಭೌಗೋಳಿಕ ಪರಿಸರವೇ ಕಾರಣವಾಗುತ್ತದೆ. ಮತ್ತು ಆ ಪರಿಸರದ ನಾಶಕ್ಕೂ ಸಹ ಅಲ್ಲಿನ ಪರಿಸರವೇ ಪ್ರಮುಖ ಕಾರಣವಾಗುತ್ತದೆ. ಮಾನವನ ಸರ್ವಾಂಗೀಣ ಅಭೀವೃದ್ದಿಗೆ ಭೌಗೋಳಿಕ ಪರಿಸರವು ತನ್ನದೆ ಆದ ಕೊಡುಗೆ ನೀಡಿದೆ. ಇಲ್ಲಿಯ ಪ್ರಾಗೈಹಾಸಿಕ ಜನರು ನಿಸರ್ಗದತ್ತವಾದ ಸಂಪತ್ತನ್ನು ತನ್ನ ನಿತ್ಯ ಬಳಕೆಗಾಗಿ ಬಳಸಿಕೊಂಡು, ತಾನು ಬೆಳವಣಿಗೆ ಹೊಂದಿದ್ದನ್ನು ಪ್ರಸ್ತುತ ದಿನಗಳಲ್ಲಿ ಕಾಣಬಹುದು. ಈ ಹಂಪಿ ಪರಿಸರವು ಪ್ರಾಗಿತಿಹಾಸಿಕ ಕಾಲದಿಂದ ಇಂದಿನವರೆಗೆ ತನ್ನದೇ ಆದ ಮಹತ್ವವಾದ ಸ್ಥಳವಾಗಿ ಬಿಂಬಿಸಿಕೊಳ್ಳಲು ಇಲ್ಲಿನ ನೈಸರ್ಗಿಕ ಪರಿಸರವೇ ಕಾರಣವಾಗಿ ವಿಶ್ವದ ಐತಿಹಾಸಿಕ ತಾಣವಾಗಿ ಗುರುತಿಸಿಕೊಂಡಿದೆ.

### ಭೌಗೋಳಿಕ ಲಕ್ಷಣಗಳು

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿದ ಹಂಪಿ ಪರಿಸರವು ೧೪.೨೦೦-೧೫.೧೫೦° ಮೀ. ಅಕ್ಷಾಂಶ ಮತ್ತು ೭೫.೪೦೦-೭೭.೧೧೦° ರೇಖಾಂಶಗಳ ನಡುವೆ ಇದೆ. ಇದರ ಪೂರ್ವಕ್ಕೆ ಬಳ್ಳಾರಿ ತಾಲೂಕು, ಪಶ್ಚಿಮಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ.[೫] ಹಂಪಿಯ ಕೇಂದ್ರ ಭಾಗದಿಂದ ೬೦ ಕಿ.ಮೀ. ವ್ಯಾಪ್ತಿಯನ್ನು ಇಲ್ಲಿನ ಭೂ-ಬಾಗವನ್ನು ಹಂಪಿ ಪರಿಸರ ಎಂದು ಪರಿಗಣಿಸಲಾಗಿದ್ದು, ಇಂದು ಇದರಲ್ಲಿ ಬರಬಹುದಾದ ಹೊಸಪೇಟೆ ಹಾಗೂ ಗಂಗಾವತಿ ತಾಲೂಕುಗಳಿಗೆ ಪ್ರಸ್ತುತ ಅಧ್ಯಾಯನವು ಸಿಮೀತಗೊಳಿಸಿಕೊಳ್ಳಲಾಗಿದೆ. ಈ ಭೂಭಾಗದ ಲಕ್ಷಣಗಳನ್ನು ಮುಂದೆ ವಿವರಿಸಲಾಗುವುದು.

### ಭೂ ರಚನೆ ಮತ್ತು ಶಿಲಾಸಂಪತ್ತು

ಇಲ್ಲಿನ ಭೌಗೋಳಿಕ ಪರಿಸರವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್ ಶಿಲೆಗಳಿಂದ ಕಂಗೊಳಿಸುತ್ತದೆ. ಸಾಮಾನ್ಯವಾಗಿ ಕ್ರಿಸ್ಟನ್ ಲೈನ್‌ಸಿಸ್ಟ್ (ಸ್ಪಟಿಕ ಪದರು ಶಿಲೆ) ಎಪಿಡಿಯೋರಾಯಿಟ್ಸ ಗ್ರಾನೈಟ್ ಮತ್ತು ಲೇಟರ್ ಗ್ರಾನೈಟ್ ಶಿಲಾಪದರಗಳಿಂದ ಕೂಡಿದೆ.

ಹಂಪಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು ಬೆಟ್ಟದಿಂದಾವರಿಸಿದೆ. ಹೊಸಪೇಟೆ, ಕಂಪ್ಲಿ, ದರೋಜಿ, ಕುರುಗೋಡು, ಬಳ್ಳಾರಿ ಮುಂತಾದ ಸ್ಥಳಗಳಲ್ಲಿ ದೊಡ್ಡ ದೊಡ್ಡ ಬೆಟ್ಟಗಳಿವೆ. ಆನೆಗೊಂದಿ ಬೆಟ್ಟ, ಹಿರೇಬೆಣಕಲ್ ಮತ್ತು ಕಮ್ಮಟ ದುರ್ಗಗಳ ಬೆಟ್ಟಗಳು ಎತ್ತರದ ಶಿಖರಗಳನ್ನು ಹೊಂದಿವೆ. ತುಂಗಭದ್ರಾ ನದಿಯ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ಕಡೆಗೆ ಹಬ್ಬಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ ಕಲ್ಲಪ್ಪನ ಗುಡ್ಡ ವಾಯುವ್ಯದಿಂದ ಈಶ್ಯಾನ್ಯಕ್ಕೆ ಸಾಗಿದ್ದು ಇದರಲ್ಲಿ ನರಸಿಂಹದೇವರ ಗುಡ್ಡ ಸೇರಿದಂತೆ ಉಚ್ಚಂಗಿಯಲ್ಲಿ ಕೊನೆಗೊಳ್ಳುತ್ತದೆ.[೬] ಕೆಲವು ಕಡೆ ಬಯಲು ಪ್ರದೇಶವಿದೆ. ಈ ಭಾಗ ಸಮತಟ್ಟಾಗಿರುವುದರಿಂದ ನೀರಿನ ಶೇಖರಣೆಗೆ ಕಣಿವೆಗಳು ವಿರಳವಾಗಿವೆ. ಅಲ್ಲಲ್ಲಿ ಇರುವ ತಗ್ಗಿನಿಂದ ಮಳೆಗಾಲದ ನೀರು ಇಂಗುವಂತಹ ವ್ಯವಸ್ಥೆಯು ಸಹ ನೈಸರ್ಗಿಕದತ್ತವಾದದ್ದು ಆಗಿದೆ. ಈ ಪ್ರದೇಶವು ಸಮತಟ್ಟಾಗಿ ಇರುವುದರಿಂದ ಯಾವುದೆ ಮರಗಿಡಗಳು ಇರುವುದಿಲ್ಲ. ಅಲ್ಲದೆ ಈ ಪ್ರದೇಶ ಕಪ್ಪು ಎರೆಮಣ್ಣಿನಿಂದ ಕೂಡಿದೆ. ಈ ಸಮತಟ್ಟಾದ ಪ್ರದೇಶದಲ್ಲಿ ಅಲ್ಲಲ್ಲಿ ಸಣ್ಣಬೆಟ್ಟಗಳನ್ನು ಕಾಣಬಹುದು ಅದು ಹಂಪೆಯ ಕೆಲವು ಕಡೆ ಮಾತ್ರ ಇದೆ. ವಿಶೇಷವಾಗಿ ಈ ಹಂಪಿ ಪರಿಸರದ ದರೋಜಿ, ಕಂಪ್ಲಿ, ಕುರುಗೋಡು ಹಂಪಿಯ ಬೆಟ್ಟಗಳನ್ನು ಸೇರಿಸಿಕೊಂಡು ಎಲ್ಲವೂ ಗ್ರಾನೈಟ್ ಶಿಲೆಗಳನ್ನು ಹೊಂದಿವೆ. ಸಾಮಾನ್ಯವಾಗಿ ಹಂಪಿ ಪರಿಸರ ಎಲ್ಲ ಭಾಗಗಳಲ್ಲೂ ಗ್ರಾನೈಟ್ ಶಿಲೆಗಳು ಅಧಿಕವಾಗಿ ಸಿಗುತ್ತವೆ.

ಈ ಗ್ರಾನೈಟ್ ಬೆಟ್ಟಗಳಲ್ಲಿ ಕಲ್ಲುಗಳ ಕುಪ್ಪೆಗಳು ದೊಡ್ಡ ದೊಡ್ಡ ರಾಶಿಯಾಗಿದ್ದು ಇಲ್ಲಿ ಬೆಟ್ಟಗಳ ಗುಂಪನ್ನು ಕಾಣಬಹುದು. ಈ ರೀತಿಯ ಬೆಟ್ಟಗಳ ಗುಂಪನ್ನು ಹಂಪಿ ಪರಿಸರದ ಕೆಲವು ಕಡೆ ಕಾಣಬಹುದು. ಈ ಬೆಟ್ಟಗಳ ವಿಶೇಷತೆ ಎಂದರೇ ಇವು ಅಸಾಮಾನ್ಯ ಕಂದು ಇಲ್ಲವೆ ಬೂದು ವರ್ಣದಲ್ಲಿದ್ದು ಈಗಾಗಲೆ ತಿಳಿಸಿರುವ ಗ್ರಾನೈಟ್ ಶಿಲಾವರ್ಗಕ್ಕೆ ಸೇರಿವೆ.[೭]

ಈ ಬೆಟ್ಟ ಗುಡ್ಡಗಳಲ್ಲಿನ ಗುಹೆಗಳು, ಕಲ್ಲಾಸರೆಗಳು ಪ್ರಾಗೈಹಾಸಿಕ ಮಾನವನು ಇಲ್ಲಿ ನೆಲಸಲು ಮತ್ತು ಜನ ವಸತಿಯು ಮುಂದುವರಿಯಲು ವಾಸಕ್ಕೆ ಒಂದೆಡೆ ಸಹಾಕಾರಿಯಾದರೆ, ಇನ್ನೊಂದೆಡೆ ಇಲ್ಲಿನ ಶಿಲೆ ಆಯುಧೋಪಕರಣಗಳನ್ನು ತಯಾರಿಸಿಕೊಳ್ಳಲು ಸಹಕಾರಿ–ಯಾಗಿರುವುದರಿಂದ ಈ ಪರಿಸರದಲ್ಲಿ ಪ್ರಾಗೈತಿಹಾಸದ ಜನರು ವಾಸಮಾಡಲು ಮತ್ತು ಒಂದು ಸ್ಥಳವು ಪ್ರಾಮುಖ್ಯತೆಯನ್ನು ಪಡೆಯಲು ಅಲ್ಲಿನ ನೈಸರ್ಗಿಕ ವಸ್ತುಗಳೇ ಕಾರಣವೆಂದು ತಿಳಿದುಬರುತ್ತದೆ.

**ಮಣ್ಣು ಮತ್ತು ಖನಿಜ ಸಂಪತ್ತು**

ಈ ಹಂಪಿ ಪರಿಸರದಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಮತ್ತು ಫಲವತ್ತಾದ ಜೇಡಿಮಣ್ಣು ಹರಡಿದೆ. ಮರಳು ಮಿಶ್ರಿತ ಕೆಂಪು ಮಣ್ಣು ಸಾಮಾನ್ಯವಾಗಿ ತುಂಗಭದ್ರ ಪ್ರದೇಶದಲ್ಲಿ ಕಂಡುಬರುತ್ತದೆ. ಈ ಭೂ ಭಾಗವನ್ನು "ಖನಿಜಗಳ ನಿಧಿ" ಎಂದರೂ ತಪ್ಪಿಲ್ಲ. ಖನಿಜಗಳಲ್ಲೆಲ್ಲ ಅತಿ ಮುಖ್ಯವಾದುದೆಂದರೆ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದಲೂ ಇದರ ಉಪಯೋಗದಿಂದ

ಮಾನವನು ನಗರಿಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಇಲ್ಲಿ ದೊರೆಯುವ ವಿವಿಧ ಖನಿಜಗಳ ವಿವರ ಇಂತಿದೆ.[೮] ಕಬ್ಬಿಣದ ಅದಿರು ಹೊಸಪೇಟೆ, ಹಂಪಿ ಪರಿಸರದ ಸುತ್ತಮುತ್ತ ದೊರೆಯುತ್ತದೆ. ಮ್ಯಾಗ್ನಸೈಟ್ ತೋರಣಗಲ್ಲಿನಲ್ಲಿ ಅಧಿಕವಾಗಿ ದೊರೆಯುತ್ತದೆ. ಸುಣ್ಣದ ಕಲ್ಲು ತೋರಣಗಲ್ಲು, ಮೆಟ್ರಿಯಲ್ಲಿ ದೊರೆಯುತ್ತದೆ. ಬೆಣಚು ಕಲ್ಲು ರಾಮದುರ್ಗ, ಗಾದಿಗನೂರುಗಳಲ್ಲಿ ದೊರೆಯುತ್ತದೆ.[೯]

ಈ ಮೇಲಿನ ರೀತಿಯ ಮಣ್ಣು ಪ್ರಾಗೈತಿಹಾಸಿಕ ಕಾಲದ ಮಾನವನ ವಾಸಕ್ಕೆ ಹಾಗೂ ನಂತರದ ಕಾಲದ ಮಾನವನ ಕೃಷಿ ಚಟುವಟಿಕೆಗಳನ್ನು ಮಾಡಲು ಸಹಕಾರಿಯಾಯಿತು. ಇಲ್ಲಿ ದೊರೆಯುವ ಖನಿಜ ಸಂಪತ್ತು ಅಂದಿನಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ ಉಪಯುಕ್ತವಾಗಿದೆ. ಅಲ್ಲದೆ ಈ ಹಂಪಿ ಪರಿಸರದಲ್ಲಿ ಬೃಹತ್ ಸಾಮ್ರಾಜ್ಯವು ಉದಯಿಸಲು ಇಲ್ಲಿನ ಮಣ್ಣು ಖನಿಜ ಸಂಪತ್ತು ಕೂಡ ತನ್ನದೆ ಆದಂತಹ ಪ್ರಭಾವವನ್ನು ಕಾಣಬಹುದು.

**ಅರಣ್ಯ ಮತ್ತು ನದಿಗಳು**

ಈ ಹಂಪಿ ಪರಿಸರದಲ್ಲಿ ಭೌಗೋಳಿಕ ವಿಸ್ತೀರ್ಣದ ಅರ್ಧದಷ್ಟು ಭೂ ಪ್ರದೇಶದಲ್ಲಿ ಅರಣ್ಯದಿಂದ ಕೂಡಿದೆ. ಇವುಗಳಲ್ಲಿ ಹೆಚ್ಚಿನ ಪ್ರಮಾಣ ಅಂದರೆ ಹೊಸಪೇಟೆ, ಕೂಡ್ಲಿಗಿ, ಸಂಡೂರಿನ ಕಡೆ ವಿಸ್ತರಿಸಿದೆ.[೧೦] ಈ ಪ್ರದೇಶವು ಮುಂಗಾರು ಹಾಗೂ ಹಿಂಗಾರು ಮಳೆಯ ಸೆರಗಿನ ಪ್ರದೇಶವಾಗಿದೆ. ಆದುದರಿಂದ ಇಲ್ಲಿ ಅಲ್ಬೇಜಿಯಾ, ಅಕೆಶಿಯಾ, ಅರಾಬಿಕ್, ಬಿಯಾಸ್ ಜಾತಿಗಳಿಗೆ ಸೇರಿದ ಕುರುಚಲು ಮರಗಿಡಗಳು ಹೆಚ್ಚಾಗಿ ಬೆಳೆಯುತ್ತವೆ. ಇಂತಹ ಮರ ಗಿಡದ ಪ್ರದೆಶವನ್ನು ಅವಲಂಬಿಸದ ಪ್ರಾಣಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ.[೧೧]

ಈ ಹಂಪಿ ಪರಿಸರದಲ್ಲಿ ಹರಿಯುವ ನದಿಗಳಲ್ಲಿ ತುಂಗಭದ್ರ ನದಿ ಮುಖ್ಯವಾದದು. ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಇದು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾಗುವ ಎರಡು ನದಿಗಳು ಶಿವಮೊಗ್ಗ ಜಿಲ್ಲೆ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲ್ಲಿ ಒಂದು ತುಂಗ ಇನ್ನೊಂದು ಭದ್ರಾ ಎರಡು ಕಲೆತು ಮುಂದೆ ಸಾಗಿದಾಗ ತುಂಗಭದ್ರಾ ಎಂದು ಕರೆಯಲಾಗುತ್ತದೆ. ಈ ನದಿ ಪಶ್ಚಿಮದಲ್ಲಿ ಧಾರವಾಡ, ಉತ್ತರದಲ್ಲಿ ಕೊಪ್ಪಳ ಹಾಗೂ ರಾಯಚೂರು ಜಿಲ್ಲೆಗಳಿಗೆ ಗಡಿಗಳಾಗಿ ಪರಿಣಮಿಸಿದೆ. ಪ್ರಾಚೀನ ಕಾಲದಿಂದಲೂ ತುಂಗಭದ್ರಾ ನದಿಯು ಕೃಷಿ ಅಭಿವೃದ್ಧಿಗೆ ನೀರನ್ನು ಒದಗಿಸುತ್ತದೆ.

ತುಂಗಭದ್ರ ನದಿಯ ಉಲ್ಲೇಖ ರಾಮಾಯಣ ಮಾಹಾಭಾರತದಲ್ಲಿ ಜಾಹ್ನವಿ ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ 'ಪಂಪಾತೀರ್ಥ' ವೆಂದೇ ಕರೆಯಲಾಗುತ್ತದೆ. ಇದರ ನೀರು ರುಚಿಕರವಾಗಿದೆ.

ಇದರಿಂದ 'ಗಂಗಾಸ್ನಾನ, ತುಂಗಾಪಾನ' ಎಂಬ ನಾಣ್ಣುಡಿಯೇ ಈ ಪರಿಸರದಲ್ಲಿ ಬೆಳೆದು ಬಂದಿರುವುದು ಗಮನಾರ್ಹವಾಗಿದೆ. ಈ ತುಂಗಭದ್ರಾ ನದಿ ಬಳ್ಳಾರಿ ಜಿಲ್ಲೆಯನ್ನು ಹರಪನಹಳ್ಳಿ ತಾಲೂಕಿನ ಕಡಲೆ ಎಂಬ ಗ್ರಾಮದಲ್ಲಿ ಪ್ರವೇಶಿಸಿ ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರಗುಪ್ಪ ತಾಲೂಕುಗಳನ್ನೊಳಗೊಂಡಂತೆ ೩೨೦ ಕಿ.ಮೀ. ಚಲಿಸಿ ಆಲೂರು ತಾಲೂಕಿನ ಚಲ್‌ಕೂಡಲೂರು ಬಳಿ ಆಂಧ್ರಪ್ರದೇಶವನ್ನು ಸೇರುತ್ತದೆ.[೧೨] ಒಟ್ಟಿನಲ್ಲಿ ಈ ಹಂಪಿ ಪರಿಸರದಲ್ಲಿನ ಜನರ ವಾಸಕ್ಕೆ ಹಾಗೂ ಕೃಷಿಗೆ ಅತ್ಯಂತ ಪ್ರಮುಖ ನದಿಯಾಗಿದೆ.

**ವಾಯುಗುಣ ಮತ್ತು ಪ್ರಾಣಿ-ಪಕ್ಷಿ ಹಾಗೂ ಮುಖ್ಯ ಬೆಳೆಗಳು**

ಬೇಸಿಗೆ ಕಾಲವು ಫೆಬ್ರವರಿ ಅಂತ್ಯದಿಂದ ಆರಂಭವಾಗಿ ಜೂನ್ ತಿಂಗಳವರೆಗೆ ಇರುತ್ತದೆ. ಆಗ ಉಷ್ಣಾಂಶ ಸರಾಸರಿ ೧೬.೨° ಸೇ ರಿಂದ ೪೨.೯° ಸೆ. ವರೆಗೆ ಇರುತ್ತದೆ. ಕೆಲವು ಸಲ ಇದು ೪೫ ರಿಂದ ೪೯° ಸೆ. ವರೆಗೆ ಏರುತ್ತದೆ. ಜುಲೈ ತಿಂಗಳಲ್ಲಿ ಆರಂಭವಾಗುವ ಮಳೆಗಾಲ ನವೆಂಬರ್ ತಿಂಗಳವರೆಗೆ ಇರುತ್ತದೆ. ಮಳೆಯ ವಾರ್ಷಿಕ ಸರಾಸರಿ ೫೨೪.೯ ಮಿ.ಮೀ. ಇರುತ್ತದೆ. ನವೆಂಬರ್ ಕೊನೆಯಿಂದ ಫೆಬ್ರುವರಿಯವರೆಗೆ ಚಳಿಗಾಲ ವಿರುತ್ತದೆ ಶುಷ್ಕ ವಾತವರಣವಿರುವ ಈ ಪ್ರದೇಶ ಮನುಷ್ಯನ ವಾಸಕ್ಕೆ ಅತ್ಯಂತ ಯೋಗ್ಯವಾಗಿದೆ.

ಈ ಪ್ರದೇಶದ ಕಾಡು ಹಾಗೂ ಬೆಟ್ಟಗುಡ್ಡಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ಮುಳ್ಳುಹಂದಿ, ನರಿ, ಜಿಂಕೆ, ತೋಳ, ಮೊದಲಾದ ಕಾಡು ಪ್ರಾಣಿಗಳಿವೆ. ಹಾಗೂ ನವಿಲು, ಕಾಗೆ, ಗೂಗೆ, ನೀರುಕೋಳಿ, ಗುಬ್ಬಿ, ಕಿಂಗ್‌ಫಿಷರ್ ಮುಂತಾದ ಪಕ್ಷಿಗಳು ಕಂಡುಬರುತ್ತವೆ. ತುಂಗಭದ್ರಾ ನದಿ ನೀರಿನಲ್ಲಿ ಮೊಸಳೆಗಳಿವೆ.[೧೩] ತುಂಗಭದ್ರಾ ಮತ್ತು ಅದರ ಉಪನದಿಗಳ ಹಾಗೂ ಹಳ್ಳ ಕೆರೆಗಳ ನೀರನ್ನು ಬಳಸಿಕೊಂಡು ಇಲ್ಲವೆ ಮಳೆಯಾಶ್ರಿತ ನೀರಿನ ಸಹಾಯದಿಂದ ಭತ್ತ, ಗೋಧಿ, ಜೊಳ, ಗೋವಿನ ಜೋಳ, ರಾಗಿ, ತೊಗರಿ, ಕಡಲೆ ಮೊದಲಾದ ದಾನ್ಯಗಳು ಹಾಗೂ ಕಬ್ಬು, ಹತ್ತಿ, ಬಾಳೆ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ರೀತಿಯ ಎಲ್ಲಾ ಸವಲತ್ತುಗಳು ಈ ಭೂ ಭಾಗದಲ್ಲಿ ಇದ್ದಿದ್ದರಿಂದ ಹಂಪಿ, ಆನೆಗೊಂದಿ, ಮಲ್ಲಾಪೂರ ಇನ್ನೂ ಮುಂತಾದ ಸ್ಥಳಗಳಲ್ಲಿ ಪ್ರಾಗೈತಿಹಾಸಿಕವಾಗಿ ಹಾಗೂ ಈ ಭೂ ಭಾಗದಲ್ಲಿ ಪ್ರಬಲ ರಾಜ್ಯಗಳನ್ನು ಕಟ್ಟಲು ಇಲ್ಲಿನ ಭೌಗೋಳಿಕ ಪರಿಸರವು ಸಹಾಕಾರಿಯಾಯಿತು. ಇದರಿಂದಾಗಿಯೇ ಹಂಪಿ, ಆನೆಗೊಂದಿ ಮುಂತಾದ ನೆಲೆಗಳಲ್ಲಿ ಮನುಷ್ಯ ಪ್ರಾಗೈತಿಹಾಸಿಕ ಕಾಲದಿಂದ ಇತಿಹಾಸ ಕಾಲದಲ್ಲೂ ವಾಸಿಸುತ್ತ ಆ ಪರಂಪರೆ ಇಂದಿಗೂ ಮುಂದುವರಿಯಲು ಕಾರಣವಾಗಿದೆ. ಹೀಗಾಗಿ ಯಾವುದೆ ಒಂದು ರಾಜ್ಯ ಸಾಮ್ರಾಜ್ಯವಾಗಿ ಬೆಳೆಯಲು ಮತ್ತು ಅದರ ಅವನತಿಗೂ ಭೌಗೋಳಿಕ ಪರಿಸರ ಕಾರಣವಾಗುತ್ತದೆ.

## ೨.೩. ಪ್ರಾಗಿತಿಹಾಸ

ಭೂಮಿಯ ಹುಟ್ಟು ಸುಮಾರು ೬ ಕೋಟಿ (ಮಿಲಿಯನ್) ವರ್ಷಗಳಷ್ಟು ಹಿಂದೆ ಆಯಿತು. ನಂತರ ಮೊದಲ ಜೀವಿ ಸುಮಾರು ೩೫೦-೪೦೦ ಕೋಟಿ (೩.೫-೪) ಮಿಲಿಯನ್ ವರ್ಷಗಳ ಹಿಂದೆ ಸಂಭವಿಸಿರಬಹುದಾದ ಊಹೆ ಇದೆ.[೧೪] ಮಾನವ ಈ ಜೀವವಿಕಾಸದ ಏಣಿಯಲ್ಲಿ ಎತ್ತರಕ್ಕೆ ಏರಿರುವ ಒಂದು ಜೀವಿ. ಈ ದೀರ್ಘಾವಧಿ ಭೂ ಇತಿಹಾಸಕ್ಕೆ ಹೋಲಿಸಿದರೆ ಮಾನವನ ಪೂರ್ವಜರ ಹುಟ್ಟು ಕೇವಲ ೬೫ ಮಿಲಿಯನ್ ವರ್ಷಗಳ ಹಿಂದಷ್ಟೆ ಆಗಿರುವ ದಾಖಲೆ ಸಿಗುತ್ತದೆ. ಇಡೀ ಪ್ರಾಣಿ ಜಗತ್ತಿನಲ್ಲಿ ಮಾನವನಿಗೆ ಒಂದು ವ್ಯವಸ್ಥಿತ ಸ್ಥಾನವಿದೆ.

ಭಾರತದಲ್ಲಿ ಆದಿಮಾನವ ಪ್ರಾಗೈತಿಹಾಸಿಕ ಕಾಲದ ವಿವಿಧ ಕಾಲಘಟ್ಟಗಳಲ್ಲಿ ಜೀವಿಸಿದ್ದು ಹಲವಾರು ಉದಾಹರಣೆಗಳು ದೊರತಿವೆ. ಅದೇ ರೀತಿ ಕರ್ನಾಟಕದ ಹಂಪಿಯ ಪರಿಸರವು ಪ್ರಮುಖ ಪ್ರಾಚೀನ ನೆಲೆಯಾಗಿದೆ. ಹಂಪಿ ಪರಿಸರವು ಕರ್ನಾಟಕದ ಪ್ರಾಗಿತಿಹಾಸ ಕಾಲದ ದೃಷ್ಟಿಯಿಂದ ಮಹತ್ವದ ನೆಲೆಯಾಗಿದೆ. ಕಮಲಾಪುರದಲ್ಲಿ ಆದಿ ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಕುರುಹುಗಳು ಕಂಡು ಬಂದಿವೆ. ಹಾಗೂ ಹಂಪಿಯಲ್ಲಿ ಶಿಲಾತಾಮ್ರಯುಗ, ಬೃಹತ್ ಶಿಲಾಯುಗ, ಇತಿಹಾಸ ಆರಂಭಯುಗದ ಹಂತದ ವರ್ಣಚಿತ್ರಗಳು, ಗುಹಾ ಚಿತ್ರಗಳು ದೊರೆತಿವೆ. ಅಲ್ಲದೆ ವೆಂಕಟಾಪುರದಲ್ಲಿ ನೂತನ ಶಿಲಾಯುಗ ಶಿಲಾತಾಮ್ರಯುಗಕ್ಕೆ ಸೇರಿದ ನೆಲೆಗಳು ಕಂಡುಬಂದಿವೆ. ಈ ಹಂಪಿ ಪರಿಸರವು ಪ್ರಾಗಿತಿಹಾಸ ಕಾಲದ ಮಾನವನ ಪ್ರಸಿದ್ಧ ತಾಣವಾಗಿರುವುದರಲ್ಲಿ ಸಂಶಯವಿಲ್ಲ. ಹಂಪಿ ಉತ್ಖನನದ ಮೂಲಕ "ಕರ್ನಾಟಕದ ಪ್ರಾಗಿತಿಹಾಸ"ಕ್ಕೆ ಒಂದು ಹೊಸ ದೃಷ್ಟಿಕೋನ ತಂದುಕೊಟ್ಟಿತೆಂದೇ ಹೇಳಬಹುದು. ಈ ಪ್ರಾಗಿತಿಹಾಸ ಕಾಲದ ಮಾನವನು ಪ್ರಪ್ರಥಮವಾಗಿ ಬಳಸಿದ ಆಯುಧ ಸಾಮಾಗ್ರಿ ಎಂದರೆ ಶಿಲೆಯಾಗಿರುವುದರಿಂದ ಈ ಕಾಲವನ್ನು ಶಿಲಾಯುಗ ಸಂಸ್ಕೃತಿಯ ಕಾಲವೆಂತಲೂ ಕರೆಯುತ್ತಾರೆ. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಪ್ರಾಗಿತಿಹಾಸ ಈ ಜೀವನ ಕ್ರಮವನ್ನು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ.

I. ಆದಿ ಹಳೇ ಶಿಲಾಯುಗ

II. ಮದ್ಯ ಹಳೇ ಶಿಲಾಯುಗ

III. ಅಂತ್ಯ ಹಳೇ ಶಿಲಾಯುಗ

ಎಂದು, ಇದರ ನಂತರದ ಬರುವ ಶಿಲಾಯುಗ ಸಂಸ್ಕೃತಿ ಎಂದರೆ ಸೂಕ್ಷ್ಮ ಶಿಲಾಯುಗ ಸಂಸ್ಕೃತಿ, ನೂತನ ಶಿಲಾಯುಗ ಸಂಸ್ಕೃತಿ, ಬೃಹತ್ ಶಿಲಾಯುಗ ಸಂಸ್ಕೃತಿ ಮತ್ತು ಇತಿಹಾಸ ಕಾಲದ ಆರಂಭ ಇವು ಪ್ರಾಗಿತಿಹಾಸದ ಪ್ರಮುಖ ಕಾಲಘಟ್ಟಗಳಾಗಿವೆ.[೧೫]

### ೧) ಆದಿ ಹಳೆಯ ಶಿಲಾಯುಗದ ಸಂಸ್ಕೃತಿ

ಭಾರತದಲ್ಲಿ ಆದಿ ಹಳೇಯ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ೧೮೬೩ ರಲ್ಲಿ ಬೆಳಕು ಕಂಡಿದ್ದು ಇದೇ ಸಮಯದಲ್ಲಿ ಕರ್ನಾಟಕದ ಮಲಪ್ರಭಾ ಹಾಗೂ ತುಂಗಭದ್ರಾ ನದಿ ಕೊಳ್ಳದಲ್ಲಿಯು ಈ ಸಾಂಸ್ಕೃತಿಕ ಹಂತವಿದ್ದುದು ತಿಳಿಯುತ್ತದೆ. ಈ ಹಂತದ ಹಲವು ನೆಲೆಗಳನ್ನು ಭೂ ವೈಜ್ಞಾನಿಕ ದೃಷ್ಟಿಕೋನದಲ್ಲಿ ಅಧ್ಯಯನ ನಡೆಸಿ ಸ್ತರ ವಿವರಗಳೊಂದಿಗೆ ಶಿಲೋಪಕರಣವನ್ನು ಸಂಗ್ರಹಿಸಲಾಗಿದೆ. ಅವು ಪ್ರಸ್ತುತ ಅಧ್ಯಯನದ ಹಂಪಿ ಪರಿಸರದ ದರೋಜಿ, ಮಲ್ಲಾಪೂರ, ಗಾದಿಗನೂರು, ಈ ಆದಿ ಹಳೇ ಸಂಸ್ಕೃತಿಯ ನೆಲೆಗಳಿವು. ಇಲ್ಲಿ ಈ ಸಂಸ್ಕೃತಿಯ ಕೈಗೊಡಲಿ ಉಪಕರಣ, ಹೆರೆಗತ್ತಿ, ಮಚ್ಚುಗತ್ತಿ ಮೊದಲಾದ ಉಪಕರಣಗಳು ದೊರೆತಿವೆ.[೧೬] ಈ ಕಾರಣದಿಂದ ಹಂಪಿ ಪರಿಸರದಲ್ಲಿ ಆದಿ ಹಳೇ ಶಿಲಾಯುಗದ ನೆಲೆಯು ಇತ್ತು ಎಂಬುವುದು ಸ್ಪಷ್ಟವಾಗುತ್ತದೆ.

### ೨) ಮಧ್ಯ ಹಳೇಯ ಶಿಲಾಯುಗ ಸಂಸ್ಕೃತಿ

ಭಾರತದಲ್ಲಿ ಈ ಸಂಸ್ಕೃತಿಯ ಇರುವಿಕೆಯನ್ನು ನಿರ್ದಿಷ್ಟವಾಗಿ ನಿರ್ಧರಿಸಿದಂತೆಯೇ ಕರ್ನಾಟಕದಲ್ಲಿಯ ಈ ಹಂತದ ಹಲವು ನೆಲೆಗಳು ಶೋಧಿತವಾದವು. ಈ ಹಿಂದೆ ರಾಬರ್ಟ್‌ಬ್ರೂಸ್ ಪುಟ್‌ರವರು ಮಧ್ಯ ಹಳೆಯ ಶಿಲಾಯುಗಕ್ಕೆ ಸೇರಿದ ಉಪಕರಣಗಳನ್ನು ಸಂಗ್ರಹಿಸಿದಂತೆ ಕಾಲಮಾನವನ್ನು ನಿರ್ಧರಿಸಲಾಗಲಿಲ್ಲ. ಕರ್ನಾಟಕದಲ್ಲಿ ಈ ಸಂಸ್ಕೃತಿಯು ಇರುವ ಬಗೆಗೆ ೧೯೫೭ ರಲ್ಲಿ ಆರ್.ಡಿ. ಬ್ಯಾನರ್ಜಿಯವರು ಗುರುತಿಸಿರುವರು. ಇಂತಹ ವಿಶಿಷ್ಟ ಶಿಲೋಪಕರಣಗಳನ್ನು ಘಟಪ್ರಭಾ, ಮಲಪ್ರಬಾ ಹಾಗೂ ಕೃಷ್ಣಾನದಿಗಳ ಕೆಲವು ಕಡೆ ಗುರುತಿಸಲಾಯಿತು. ಅದೇ ರೀತಿ ಪ್ರಸ್ತುತ ಅಧ್ಯಯನ ಪ್ರದೇಶದ ತುಂಗಭದ್ರಾ ಪ್ರದೇಶಗಳಲ್ಲಿಯೂ ಸಹ ಈ ಸಂಸ್ಕೃತಿಗೆ ಸೇರಿದ ನಿವೇಶನಗಳು ದೊರೆತಿವೆ. ಸಂಗನಕಲ್ಲು, ನಿಟ್ಟೂರುಗಳಲ್ಲಿ ಈ ಮಧ್ಯಶಿಲಾಯುಗ ಸಂಸ್ಕೃತಿಗೆ ಸೇರಿದ ಆದಿ ಹಳೇ ಶಿಲಾಯುಗ ಕಾಲಕ್ಕಿಂತಲೂ ಭಿನ್ನವಾಗಿ ಉತ್ತಮ ಜಾಸ್ಪರ್, ಚರ್ಟಾ ಮೊದಲಾದ ಶಿಲೆಗಳನ್ನು ಬಳಸಿ ವಿವಿಧ ಆಯುಧೋಪಕರಣಗಳು ಉತ್ಖನನದಿಂದ ದೊರೆತಿವೆ.[೧೭] ಈ ಕಾರಣದಿಂದ ಹಂಪಿ ಪರಿಸರವು ಮಧ್ಯಶಿಲಾಯುಗದ ಕೇವಲ ಎರಡು ಮೂರು ಕಡೆ ಅದರ ನಿವೇಶನಗಳು ದೊರೆತಿರುವುದರಿಂದ ಇದು ಸಹ ಒಂದು ಮಧ್ಯ ಹಳೆಯ ಶಿಲಾಯುಗದ ಸಂಸ್ಕೃತಿಯ ನೆಲೆಯೆಂದು ತಿಳಿದು ಬರುತ್ತದೆ.

### ೩) ಅಂತ್ಯ ಹಳೇಶಿಲಾಯುಗ ಸಂಸ್ಕೃತಿ

ಹಳೇ ಶಿಲಾಯುಗ ಸಂಸ್ಕೃತಿಯ ಕೊನೆಯ ಹಂತವೇ ಅಂತ್ಯ ಹಳೇಯ ಶಿಲಾಯುಗ ಸಂಸ್ಕೃತಿಯಾಗಿದೆ. ಈ ಹಂತದ ನೆಲೆಗಳನ್ನು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಸಂಖ್ಯೆಯಲ್ಲಿ ಕಡಿಮೆಯಾಗಿವೆ. ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ೧೯೫೯ ರಲ್ಲಿ ಸಾಲವಾಡಗಿಯಲ್ಲಿ ಉಪಕರಣ ಉತ್ಪಾದನಾ ನೆಲೆಯನ್ನು ಅ. ಸುಂದರ ಅವರು ಗುರುತಿಸಿದರು. ನಂತರ ಕರ್ನಾಟಕದ

ಇನ್ನಿತರ ಸ್ಥಳಗಳಲ್ಲಿ ಉತ್ಖನನ ಕೈಗೊಂಡಾಗ ಹಂಪಿ ಪರಿಸರದ ತುಂಗ ಮತ್ತು ಅದರ ಸುತ್ತಮುತ್ತಲಿನ ಸ್ಥಳಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ಕಂಡುಬಂದವು.[೧೮] ಈ ಕಾರಣದಿಂದ ಅಪರೋಕ್ಷವಾಗಿ ಅಂತ್ಯ ಶಿಲಾಯುಗದ ನೆಲೆಗಳು ಇದ್ದಿರಬಹುದು ಎಂದು ಊಹೆ ಇದೆ. ಅಲ್ಲಿನ ಉಪಕರಣಗಳು ಈ ರೀತಿಯಾಗಿ ಊಹೆಗೆ ಕಾರಣವಾಗಿವೆ.

**ಸೂಕ್ಷ್ಮ ಶಿಲಾಯುಗ ಸಂಸ್ಕೃತಿ**

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಇಲ್ಲವೆ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಗ್ರೀಕ್ ಭಾಷೆಯಲ್ಲಿ ಮೇಸೊ ಎಂದರೆ ಸೂಕ್ಷ್ಮ ಎಂದು ಲಿತಿಕ್ ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲದಲ್ಲಿ ಮಾನವ ಶಿಲೆಯಿಂದ ಬಹಳ ಸೂಕ್ಷ್ಮ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ತನ್ನ ಬಳಕೆಗೆ ಬಳಸಿಕೊಂಡಿದ್ದರಿಂದ ಈ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಮಾನವ ಜೀವನದ ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಹಂತದ ಪಾತ್ರ ಗಮನಾರ್ಹವಾದುದು. ಈ ಅವಧಿಯಲ್ಲಿ ಬೇಟೆಯಾಡುವುದು, ಮೀನು ಹಿಡಿಯುವುದು, ಆಹಾರ ಸಂಗ್ರಹಣೆ ಜೀವನದ ಅಂದಿನ ವ್ಯವಸ್ಥೆಯಾಗಿತ್ತು. ಈ ಹಂತದ ನೆಲೆಗಳು ಪ್ರಸ್ತುತ ಅಧ್ಯಯನದ ಹಂಪಿ ಪರಿಸರದ ಅನೇಕ ನೆಲೆಗಳು ಇರುವುದು ಕಂಡುಬರುತ್ತವೆ. ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೩೯ ರ ವೇಳೆಗೆ ಬೆಳಕಿಗೆ ಬಂದಿದ್ದರೂ, ಅಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ಆರಂಭವಾದುದು. ೧೯೫೬ ರ ನಂತರವೇ ಆ ನೆಲೆಗಳು ಅಂದರೆ, ಮಲ್ಲಾಪೂರ, ಕುಡುತಿನಿ, ಸಂಗನಕಲ್ಲು, ತೋರಣಗಲ್ಲು, ರಾಂಪುರ, ಗಾದಿಗನೂರುಗಳಲ್ಲಿ ಈ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳು ಆಗಿದ್ದು[೧೯] ಇಲ್ಲಿ ಅನೇಕ ಉಪಕರಣಗಳು ದೊರೆತಿವೆ. ಅವುಗಳಲ್ಲಿ ಪ್ರಮುಖವಾಗಿ ಹರೆಚಕ್ಕೆ ಮತ್ತು ಅರ್ಧಚಂದ್ರಾಕೃತಿ ಉಪಕರಣಗಳು ಹಾಗೂ ಚರ್ಟ್ ಶಿಲೆಯಲ್ಲಿ ರೂಪಿಸಿದ ಉಪಕರಣಗಳು ದೊರೆತಿರುವುದರಿಂದ ಈ ಪರಿಸರವು ಸೂಕ್ಷ್ಮ ಶಿಲಾಯುಗದ ನೆಲೆಯಾಗಿದ್ದು ಸ್ಪಷ್ಟವಾಗುತ್ತದೆ.

**ನೂತನ ಶಿಲಾಯುಗ ಸಂಸ್ಕೃತಿ**

ಗ್ರೀಕ್ ಭಾಷೆಯಲ್ಲಿ ನಿಯೋ ಎಂದರೆ ನವೀನ ಎಂದು ಹೆಸರು. ಲಿತಿಕ್ ಎಂದರೆ ಸ್ಟೋನ್ ಎಂಬ ಅರ್ಥವಿದೆ. ಈ ಹಂತದಲ್ಲಿ ಮನುಷ್ಯ ಜೀವನದ ರೀತಿ ನೀತಿಗಳು ಸಾಕಷ್ಟು ಬದಲಾವಣೆಗೊಂಡವು. ಅಲ್ಲದೇ ಈ ಕಾಲಘಟ್ಟದಲ್ಲಿ ಶಿಲಾಯುಧಗಳನ್ನು ಉಜ್ಜಿ ನಯಗೊಳಿಸಿ ತಯಾರಿಸುತ್ತಿದ್ದರಿಂದಾಗಿ ಈ ಯುಗವನ್ನು ನೂತನ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಈ ಸಂಸ್ಕೃತಿ ಹಂತವನ್ನು ಗುರುತಿಸುವಾಗ ಉಜ್ಜಿ ನಯಗೊಳಿದ ಕೊಡಲಿ ದೊರೆತಿದೆ. ಹಾಗೂ ಇದೆ ಪರಿಸರದ ವೆಂಕಟಾಪುರದಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಬೂದಿದಿಬ್ಬ ದೊರೆತಿದ್ದು

ಇದಕ್ಕೆ ವಾಲಿದಿಬ್ಬ ಎಂದು ಕರೆಯಲಾಗಿದೆ.[೨೦] ಇದೇ ರೀತಿ ಇನ್ನೂ ಹಂಪಿ ಪರಿಸರದ ಅನೇಕ ನೆಲೆಗಳಲ್ಲಿ ಈ ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಬೂದುವರ್ಣದ ಪಾತ್ರೆಗಳು, ವಾಸದ ಮನೆಗಳು ನಿರ್ಮಾಣವಾಗಿರುವುದು ಕಂಡುಬಂದಿದೆ. ಇಂತಹ ಹಲವು ಅಂಶಗಳಿಂದ ಪ್ರಸ್ತುತ ಅಧ್ಯಯನ ಪರಿಸರವು ನೂತನ ಶಿಲಯುಗ ಸಂಸ್ಕೃತಿಯ ನೆಲೆಯಾಗಿರುವುದು ತಿಳಿದುಬರುತ್ತದೆ.

**ಶಿಲಾ–ತಾಮ್ರಯುಗ ಸಂಸ್ಕೃತಿ**

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತವಿದು. ತಾಮ್ರದ ಅದುರಿನ ಲೋಹವಾಗಿ ಪರಿವರ್ತನೆ, ನೀಳಚಕ್ಕೆಗಳ ಉಪಯೋಗ, ಶಿಲೆಗೆ ಬದಲಾಗಿ ಲೋಹದ ಆಯುಧಗಳ ಬಳಕೆ ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ಧತಿ, ಮೊದಲಾದ ಮುಖ್ಯ ಲಕ್ಷಣಗಳನ್ನು ಗುರುತಿಸಿದ ಸಾಂಸ್ಕೃತಿಕ ಹಂತವಾಗಿದೆ. ಪ್ರಸ್ತುತ ಅಧ್ಯಯನದ ಹಂಪಿಯ ಪರಿಸರದಲ್ಲೂ ಈ ಸಂಸ್ಕೃತಿಯ ನೆಲೆಗಳು ಅನೇಕ ಇದ್ದು, ಅವು ಈ ಕೆಳಗಿನವು ಆಗಿವೆ. ಮಲ್ಲಪುರ, ಕಪ್ಪಗಲ್, ದರೋಜಿ, ಗಾದಿಗನೂರು ಇಲ್ಲಿ ಸಂಸ್ಕೃತಿಯ ಶಿಲೋಪಕರಣಗಳು ದೊರೆತಿವೆ. ಮತ್ತು ದರೋಜಿಯಲ್ಲಿ ಬೂದಿದಿಬ್ಬ ದೊರೆತಿದ್ದು ಶಿಲಾ–ತಾಮ್ರಯುಗ ಸಂಸ್ಕೃತಿಯ ನೆಲೆಗಳಲ್ಲಿ ಒಂದಾಗಿದೆ. ಈ ರೀತಿಯಾದ ಅಂಶಗಳಿಂದ ಹಂಪಿಯ ಪರಿಸರವು ಶಿಲಾ–ತಾಮ್ರಯುಗ ಸಂಸ್ಕೃತಿಯ ನೆಲೆ ಎಂಬುವುದು ಸ್ಪಷ್ಟವಾಗುತ್ತದೆ.[೨೧]

**ಬೃಹತ್ ಶಿಲಾಯುಗ ಸಂಸ್ಕೃತಿ**

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಕುತೂಹಲಕರವಾದ ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಈ ಹಂತದಲ್ಲಿ ಕಬ್ಬಿಣದ ಬಳಕೆಯ ಮಹತ್ವವನ್ನು ಕಾಣಬಹುದು. ಕಲ್ಲುಗೋರಿಗಳು ಈ ಜನರ ಪಾರಂಪರಿಕವಾಗಿ ನಂಬಿಕೆಗಳ ತಳಹದಿಯ ಮೇಲೆ ರೂಪೀತವಾದವುಗಳಾಗಿವೆ.[೨೨]

ಈ ಸಂಸ್ಕೃತಿಯ ಜನರು ಜೀವಿಸುತ್ತಿದ್ದ ಪ್ರದೇಶವನ್ನು ವಾಸ್ತವ್ಯದ ನೆಲೆಗಳೆಂದು ಹಾಗೂ ಶವಸಂಸ್ಕಾರದ ಕೇಂದ್ರಗಳನ್ನು ಗೋರಿ ನೆಲೆಗಳೆಂದು ಪ್ರತ್ಯೇಕವಾದ ಅಧ್ಯಯನಗಳು ಆಗಿವೆ. ಅವು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಈ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಲ್ಲಿ ಕಂಡುಬರುತ್ತವೆ. ಅವು ಯಾವುವು ಎಂದರೆ, ಹಂಪಿಯಲ್ಲಿಯ ವಿಜಯವಿಠ್ಠಲ ದೇವಾಲಯದ ಆಗ್ನೇಯ ದಿಕ್ಕಿನ ಬೆಟ್ಟದ ಸಾಲಿನಲ್ಲಿ ಮಸಳಯ್ಯನ ಗುಡ್ಡದ ಒಂದು ಭಾಗದ ಸಮತಟ್ಟಿನಲ್ಲಿ ಕಬ್ಬಿಣಯುಗದ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿಗಳ ಒಂದು ನೆಲೆಯನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ ಗುರುತಿಸಿತು. ಈ ಇಲಾಖೆ ೨೦೦೩ ರಲ್ಲಿ ಈ ನೆಲೆಯಲ್ಲಿನ ಸಂಸ್ಕೃತಿಗಳ ಅನುಕ್ರಮಗಳು ಮತ್ತು ಸ್ಥೂಲವಾದ ಲಕ್ಷಣಗಳನ್ನು ತಿಳಿಯಲು ಉತ್ಖನನ ನಡೆಸಿದಾಗ

ಈ ಬೃಹತ್ ಶಿಲಾಯುಗದ ಸಂಸ್ಕೃತಿಯ ಗುಹಾ ಚಿತ್ರದ ಅವಶೇಷಗಳು, ಈ ಬೃಹತ್ ಶಿಲಾ ಸಂಸ್ಕೃತಿಯ ಜನರ ಮಕ್ಕಳ ಎರಡು ಶವಕುಣಿಗಳು ಒಂದೊಂದರಂತೆ ಇದ್ದವು. ಮಡಿಕೆಗಳು ಹಾಗೂ ಕಲ್ಲು ಚಕ್ಕೆಗಳು ಈ ಉತ್ಖನನದಲ್ಲಿ ದೊರೆತಿವೆ.[೨೨] ಇಂತಹ ಕಾರಣದಿಂದ ಈ ಪ್ರಸ್ತುತ ಅಧ್ಯಯನ ಪರಿಸರವು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿರುವುದು ತಿಳಿದು ಬರುತ್ತದೆ.

### ಇತಿಹಾಸ ಆರಂಭ ಕಾಲ

ಮಾನವ ಜೀವನ ವಿವಿದ ಸಂಸ್ಕೃತಿಗಳ ಹಂತದಿಂದ ಲಿಪಿಯ ಬಳಕೆಗೆ ಬಂದ ಹಂತವನ್ನು ಇತಿಹಾಸ ಆರಂಭ ಕಾಲವೆಂದು ಗುರುತಿಸಬಹುದಾಗಿದೆ. ಈ ಹಂತಕ್ಕೆ ಸಂಬಂಧಿಸಿದ ಹಲವಾರು ನೆಲೆಗಳು ಅಧ್ಯಯನ ಹಾಗೂ ಉತ್ಖನನಗಳು ಈ ಸ್ಥಿತ್ಯಂತರ ಕಾಲದ ಬಗೆಗೆ ಸಾಕಷ್ಟು ಮಾಹಿತಿಯನ್ನು ಒದಗಿಸಿವೆ.

ಕರ್ನಾಟಕದ ದಕ್ಷಿಣ ಭಾಗದವರೆಗೆ ಮೌರ್ಯ ಸಾಮ್ರಾಜ್ಯದ ಪ್ರಾಬಲ್ಯ ವ್ಯಾಪಿಸಿದ ಬಗೆಗೆ ಅಲ್ಲಲ್ಲಿ ದೊರೆತಿರುವ ಶಿಲಾ ಲಿಪಿಗಳು ಹಾಗೂ ವಸ್ತು ಅವಶೇಷಗಳು ದೃಢಪಡಿಸಿವೆ. ನಂತರದ ಕಾಲದ ಪುರಾವೆಗಳಾದ ನಾಣ್ಯಗಳು, ಶಿಲ್ಪಗಳು, ವಾಸ್ತುಶೈಲಿ ಹಾಗೂ ಶಾಸನಗಳು ಹಲವು ಮನೆತನಗಳು ಆಳ್ವಿಕೆಯನ್ನು ತಿಳಿಸಿಕೊಡುತ್ತವೆ.[೨೪] ಮೌರ್ಯರು ಭಾರತದ ಇತಿಹಾಸದ ಆರಂಭದ ಸಾಮ್ರಾಜ್ಯವಾಗಿ ಕರ್ನಾಟಕದ ಕಡೆಗೂ ವ್ಯಾಪಿಸಿ ಹಂಪಿಯ ಇತಿಹಾಸ ಆರಂಭ ಕಾಲದ ನೆಲೆಯಾಗಿತ್ತು ಎಂಬುದಕ್ಕೆ ಹಂಪಿಯಲ್ಲಿನ ಉತ್ಖನನದಲ್ಲಿ ದೊರೆತ ಅವಶೇಷಗಳು ಸಾಕ್ಷಿಯಾಗಿವೆ. ಈ ರೀತಿಯಾದ ಅನೇಕ ಕಾರಣಗಳಿಂದ ಹಂಪಿಯು ಒಂದು ಪ್ರಾಗಿತಿಹಾಸ ಕಾಲದಲ್ಲಿನ ಕರ್ನಾಟಕ ಮತ್ತು ಭಾರತದ ಒಂದು ಪ್ರಾಗಿತಿಹಾಸದ ನೆಲೆಯಾಗಿತ್ತು ಎಂಬುವುದು ಅದನ್ನು ತಿಳಿಸುವ ಪ್ರಯತ್ನವಾಗಿದೆ.

### ೨.೪. ಚಾರಿತ್ರಿಕ ಹಿನ್ನೆಲೆ

ಹಂಪಿಯು ಕ್ರಿ.ಶ. ೧–೨ನೇ ಶತಮಾನಗಳಲ್ಲಿ ಬೌದ್ಧರ ನೆಲೆಯಾಗಿತ್ತೆಂದು ತರ್ಕಿಸಲಾಗಿದೆ. ೧೯೭೫–೭೬ ರ ಸಾಲಿನಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಹಂಪಿಯ ಪ್ರದೇಶದಲ್ಲಿ ಉತ್ಖನನವನ್ನು ಕೈಗೊಂಡ ಸಮಯದಲ್ಲಿ ಒಂದು ಬ್ರಾಹ್ಮೀಲಿಪಿ ಇರುವ ಶಿಲಾಶಾಸನವು ದೊರೆಯಿತು. ಇದು ಒಡೆದುಹೋಗಿರುವ ಶಾಸನದ ಕಲ್ಲಿನ ಒಂದು ಚಿಕ್ಕ ಬಾಗವಾಗಿದ್ದರೂ ಸಹ ಹಂಪಿಯ ಪೂರ್ವ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಬೀರುವಂಥ ಮುಖ್ಯ ಶೋಧನೆ ಹಾಗೂ ಪ್ರಮಾಣ ವಸ್ತುವಾಗಿದೆ. ಈ ಬ್ರಾಹ್ಮೀಲಿಪಿ ಶಾಸನವನ್ನು ತಿಳಿ ಹಸಿರುಬಣ್ಣದ ಸುಣ್ಣದ ಕಲ್ಲಿನ ಮೇಲೆ ಕೆತ್ತಲಾಗಿದೆ. ಈಗ ಕಾಣಬರುವುದು ಒಟ್ಟಿನಲ್ಲಿ ಎಂಟು ಅಕ್ಷರಗಳು ಮಾತ್ರ ಮೊದಲನೇ ಸಾಲಿನಲ್ಲಿ ಆರು, ಅದು ತ–ರ–ಸ–ಪು–ತ–ಸ ಎಂದಿದ್ದು ಎರಡನೇ ಸಾಲಿನಲ್ಲಿ

ದಾ-ನಂ ಎಂದು ಕೆತ್ತಲಾಗಿದೆ. ಇದು ಹಂಪಿಯಲ್ಲಿ ಪ್ರಪ್ರಥಮವಾಗಿ ದೊರೆತ ಬ್ರಾಹ್ಮೀಲಿಪಿ ಶಾಸನವಾಗಿರುವುದಲ್ಲದೆ ಏಕೈಕವಾದುದಾಗಿದೆ. ಇದೇ ಶೈಲಿಯಲ್ಲಿ ಬರೆಯಲಾಗಿರುವ ಬ್ರಾಹ್ಮೀಲಿಪಿ ಶಾಸನಗಳು ಆಂಧ್ರದ ಬೌದ್ಧ ಕಲಾಕೇಂದ್ರಗಳಾದ ನಾಗಾರ್ಜುನಕೊಂಡ, ಅಮರಾವತಿ ಮುಂತಾದ ಸ್ಥಳಗಳಲ್ಲಿ ದೊರೆಯುತ್ತವೆ ಮತ್ತು ಶಾಸನ ಕೆತ್ತನೆಗೆ ಬಳಸಿರುವ ತಿಳಿಹಸಿರು ಸುಣ್ಣದಕಲ್ಲು ಆಂಧ್ರದ ಪಲನಾಮ (ಈಗಿನ ಗುಂಟೂರು ಜಿಲ್ಲಾ ಪ್ರದೇಶದಲ್ಲಿ) ವಿಫುಲವಾಗಿ ದೊರೆಯುತ್ತದೆ. ಈ ಎಲ್ಲ ಕಾರಣಗಳಿಂದ ಆಂಧ್ರದ ಬೌದ್ಧರು ತಮ್ಮ ಉಪಯೋಗಾರ್ಥವಾಗಿ ಹಾಗೂ ಮತ ಪ್ರಚಾರಾರ್ಥವಾಗಿ ಚಿಕ್ಕ ಪ್ರಮಾಣದಲ್ಲಿ ಬಂದು ಬೌದ್ಧ ಸ್ಥೂಪಗಳನ್ನು ವಿಹಾರಗಳನ್ನು ಮತ್ತು ಚೈತ್ಯ ಗೃಹಗಳನ್ನು ಕಟ್ಟಿಕೊಂಡಿರಬೇಕು. ಹೀಗೆ ಕ್ರಿ.ಶ. ಆರಂಭದಲ್ಲಿ ಹಂಪಿಯು ಬಹು ಮುಖ್ಯವಲ್ಲದಿದ್ದರೂ, ಒಂದು ಗಣನೀಯ ಬೌದ್ಧ ಮತಾನುಯಾಯಿಗಳ ಕೇಂದ್ರವಾಗಿತ್ತೆಂದು ತರ್ಕಿಸಬಹುದಾಗಿದೆ.[೨೫]

ಇದರ ನಂತರ ಹಂಪಿಯು ಬಾದಾಮಿ ಚಾಲುಕ್ಯ ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ ಮತ್ತು ನೊಳಂಬರು, ಸಿಂಧರು, ಹೊಯ್ಸಳರು, ಹೊಸಮಲೆದುರ್ಗ ಅರಸರು ಹಾಗೂ ವಿಜಯನಗರದ ಅರಸರು ಇವೇ ಮೊದಲದ ರಾಜವಂಶೀಯರ ಆಳ್ವಿಕೆಗೆ ಒಳಪಟ್ಟಿದುದು ಎಂದು ತಿಳಿದುಬರುತ್ತದೆ.

## ಮೌರ್ಯರು (ಕ್ರಿ.ಪೂ. ೩೨೧-೧೮೫)

ಕರ್ನಾಟಕ ಇತಿಹಾಸ ನಿರ್ಧಿಷ್ಟವಾಗಿ ಆರಂಭವಾಗುವುದು ಮೌರ್ಯರ ಆಳ್ವಿಕೆಯಿಂದ. ಮೌರ್ಯರು (ಕ್ರಿ.ಪೂ ೩೨೧-೧೮೫) ರ ವರೆಗೆ ಆಳ್ವಿಕೆ ಮಾಡಿದರು. ಭಾರತದ ಪ್ರಸಿದ್ದ ಶಾಂತಿಪ್ರಿಯ ಅರಸ ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆ ದಕ್ಷಿಣ ಭಾರತದಲ್ಲೂ ಹರಡಿತ್ತೆಂಬುದು ತಿಳಿದುಬರುತ್ತದೆ. ಅದು ಪ್ರಸ್ತುತ ಅಧ್ಯಯನದ ಅಲ್ಲಲ್ಲಿ ದೊರೆತಿರುವ ಹಾಗೂ ಕರ್ನಾಟಕದ ವಿವಿಧ ಭಾಗಗಳಲ್ಲಿ ದೊರೆತಿರುವ ವಸ್ತು ಅವಶೇಷಗಳು ದೃಢಪಡಿಸಿವೆ.[೨೬] ಬಳ್ಳಾರಿ ಜಿಲ್ಲೆಯಲ್ಲಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಅಶೋಕನ ಶಾನಗಳು ದೊರೆತಿರುವುದರಿಂದ ಅದರ ಅಕ್ಕಪಕ್ಕದಲ್ಲಿಯೇ ಬರುವಂತಹ ಅಧ್ಯಯನ ಪರಿಸರದಲ್ಲಿಯೂ ಅಶೋಕನ ಶಾಸನ ದೊರೆಯದೆ ಇದ್ದರು ಆ ಕಾಲದ ಕೆಲವು ಅವಶೇಷಗಳು ಪತ್ತೆಯಾಗಿರುವುದರಿಂದ ಅಪರೋಕ್ಷವಾಗಿ ಮೌರ್ಯರ ಆಡಳಿತಕ್ಕೆ ಹಂಪಿಯು ಒಳಪಟ್ಟಿರಬಹುದು ಎಂದು ತಿಳಿದು ಬರುತ್ತದೆ.

## ಶಾತವಾಹನರು (ಕ್ರಿ.ಪೂ. ೨೩೦-೨೨೫)

ಮೌರ್ಯರ ನಂತರದ ದಖ್ಖನ್‌ನಲ್ಲಿ ಪ್ರವರ್ಧಮಾನಕ್ಕೆ ಬಂದ ಮನೆತನವೆಂದರೆ ಶಾತವಾಹನರು. ಇವರನ್ನು ಆಂಧ್ರಭುತ್ಯರೆಂದು ಕರೆಯುತ್ತಿದ್ದರು. ಇವರು ದಖ್ಖನ್‌ನನ್ನು ಒಳಗೊಂಡಂತೆ ಆಂಧ್ರ ಮತ್ತು ಕರ್ನಾಟಕದ ಉತ್ತರ ಭಾಗಗಳನ್ನು ಕ್ರಿ.ಪೂ. ೨೩೦ ರಿಂದ ೨೧೫ ರ ವರೆಗೆ ಆಳಿದರು. ಮೌರ್ಯರ ನಂತರ ದಕ್ಷಿಣ ಭಾರತದ ಮತ್ತು ಕರ್ನಾಟಕದಲ್ಲಿ

ತಮ್ಮ ಆಳ್ವಿಕೆಯನ್ನು ಮಾಡಿರುವುದು ಕಂಡುಬರುತ್ತದೆ. ಶಾತವಾಹನರ ಕಾಲದಲ್ಲಿ ಕರ್ನಾಟಕದ ನಾನಾಕಡೆ ಅವರ ನಾಣ್ಯಗಳು, ಶಿಲ್ಪಗಳು, ವಾಸ್ತುಶೈಲಿ ಹಾಗೂ ಶಾಸನಗಳು ಕಂಡುಬರುವುದರಿಂದ ಪ್ರಸ್ತುತ ಅಧ್ಯಯನದಲ್ಲಿ ಸಹ ಅವರು ಪ್ರಭಾವ ಕಂಡು ಬರುತ್ತದೆ.[೨೭] ಶಾತವಾಹನರ ಯಾವುದೆ ಅರಸ ನೇರವಾಗಿ ಪ್ರಸ್ತುತ ಅಧ್ಯಯನದ ಹಂಪಿ ಪರಿಸದದಲ್ಲಿ ಆಳ್ವಿಕೆ ಮಾಡದೆ ಇದ್ದರೂ ಅಪರೋಕ್ಷವಾಗಿ ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ

**ಬನವಾಸಿಯ ಕದಂಬರು (ಕ್ರಿ.ಶ. ೩೨೫-೫೪೦)**

ಪ್ರಾಚೀನ ಕರ್ನಾಟಕದ ಮೊದಲ ಅರಸು ಮನೆತನವೆಂದು ಪ್ರಸಿದ್ಧಿ ಪಡೆದ ಕದಂಬರು ಕ್ರಿ.ಶ. ೪ನೇ ಶತಮಾನದಿಂದ ೯ನೇ ಶತಮಾನದವರೆಗೆ ಆಳ್ವಿಕೆ ಮಾಡಿದರು. ಕ್ರಿ.ಶ. ೨೫೦ ರಲ್ಲಿ ಹೊರಡಿಸಿದ ಚಿತ್ರದುರ್ಗದ ಚಂದ್ರವಳ್ಳಿ ಶಾಸನ ಇವರ ಮೇಲೆ ಬೆಳಕು ಚೆಲ್ಲುತ್ತದೆ. ಈ ಕದಂಬ ವಂಶವು ಕರ್ನಾಟಕದ ಮೊದಲ ಅರಸು ಮನೆತನವಾಗಿದ್ದು, ಪ್ರಸಿದ್ಧ ಅರಸು ಮಯೂರ ವರ್ಮನು ಆಗಿದ್ದಾನೆ. ಈತನ ಆಳ್ವಿಕೆಯ ಕಾಲಾವಧಿಯಲ್ಲಿ ಇಡೀ ಕರ್ನಾಟಕವೇ ಒಂದು ರಾಜವಂಶಕ್ಕೆ ಸೇರಿಸಿ ಆಡಳಿತ ನಡೆಸಿದನು. ಈ ಸಂದರ್ಭದಲ್ಲಿ ಹಂಪಿಯು ಸಹ ಕದಂಬರ ಆಡಳಿತಕ್ಕೆ ಅಪರೊಕ್ಷವಾಗಿ ಒಳಪಟ್ಟಿತ್ತು. ಅಲ್ಲದೆ ವಿಜಯನಗರ ಸಾಮ್ರಾಜ್ಯದ ಪೂರ್ವದ ದೇವಾಲಗಳಲ್ಲಿ ಇವರ ಪ್ರಭಾವವು ಕಂಡುಬರುವದರಿಂದ ಕದಂಬರ ಆಡಳಿತಕ್ಕೆ ಹಂಪಿಯು ಒಳಪಟ್ಟಿರಬಹುದು ಎಂದು ಊಹಿಸಲಾಗಿದೆ.

**ಬಾದಾಮಿ ಚಾಲುಕ್ಯರು**

ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಈ ಪ್ರದೇಶ ಸೇರಿತ್ತೆನ್ನುವುದರ ಬಗ್ಗೆ ಯಾವುದೆ ಅನುಮಾನಗಳಿಲ್ಲವಾದರೂ ಅವರದೆಂದು ಹೇಳಬಹುದಾದ ಶಾಸನಗಳಾವವು ಹಂಪಿಯಲ್ಲಿ ದೊರೆತಿಲ್ಲ. ಆದರೆ ಬಾದಾಮಿ ಚಾಲುಕ್ಯ ವಂಶದ ಅರಸ ವಿನಯಾದಿತ್ಯ ಸತ್ಯಾಶ್ರಯನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೬೧೮-೬೯೬) ಆತನ ಮಂತ್ರಿ ಮತ್ತು ಸಂಧಿವಿಗ್ರಗಳಲೊಬ್ಬನಾದ ರಾಮ ಪುಣ್ಯಲ್ಲಭನೆಂಬುವನಿಂದ ಕ್ರಿ.ಶ. ೬೮೯ ರಲ್ಲಿ ಹೊರಡಿಸಲಾದ ತಾಮ್ರಪಟ ಶಾಸನದಲ್ಲಿ ಹಂಪೆಯ ಅಥವಾ ಪಂಪಾತನದ ಉಲ್ಲೇಖ ಬರುತ್ತದೆ. ಇದು ಸಂಸ್ಕೃತ ಬಾಷೆಯಲ್ಲಿದೆ.[೨೮] ಈ ಶಾಸನವಲ್ಲದೆ ವಾಸ್ತುಶಿಲ್ಪದೆಡೆಗೆ ಗಮನಹರಿಸಿದಾಗ ಹೇಮಕೂಟದಲ್ಲಿರುವ ದೇವಾಲಗಳ ಸಮೂಹದಲ್ಲಿ ಕೆಲವು ವಿಜಯನಗರ ಪೂರ್ವ ಕಾಲದ್ದಾಗಿವೆಯೆಂದು ಗುರುತಿಸಲಾಗಿದೆ. ಇದರಲ್ಲಿಯ ಒಂದು ದೇವಾಲಯ ಬಾದಾಮಿ ಚಾಲುಕ್ಯರದೆಂದು ದೇವರಕೊಂಡರೆಡ್ಡಿಯವರು ಗುರುತಿಸುತ್ತಾರೆ. ಇವರು ತಿಳಿಸುವುದು ಹೇಮಕೊಟದ ದೇವಾಲಯದ ಸಮುಚ್ಚಯದ ವಾಯುವ್ಯದ ಇಳಿಜಾರಿನಲ್ಲಿ ಈಗಿನ ವಿರೂಪಾಕ್ಷ ದೇವಾಲಯದ ದಕ್ಷಿಣ ಪ್ರವೇಶ ದ್ವಾರಕ್ಕೂ ತ್ರಿಕೂಟ ದೇವಾಲಯಕ್ಕು ಮಧ್ಯೆ ಒಂದು ಸಣ್ಣ ದೇವಾಲಯವಿದೆ. ಈ ದೇವಾಲಯವನ್ನು ಮರಳುಗಲ್ಲಿನಿಂದ ಕಟ್ಟಿದ್ದು, ಇತರ

ದೇವಾಲಯಗಳಿಗಿಂತ ಇದು ಬಿನ್ನವಾಗಿದೆ. ದೇವಲಯವು ಅಧಿಷ್ಠಾನದಿಂದ ಸ್ಥೂಪಿಯವರೆಗೂ ಸುಮಾರು ೨೫ ಅಡಿ ಎತ್ತರವಿದೆ. ದ್ವಿತಳವನ್ನು ಹೊಂದಿರುವ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳ ಮಾತ್ರ ಮೂಲ ರೂಪದಲ್ಲಿ ಉಳಿದಿದ್ದು, ಮುಂದಿನ ನವರಂಗ ಭಾಗ ವಿಜಯನಗರ ಕಾಲದಲ್ಲಿ ಪೂರ್ಣವಾಗಿ ಗುರುತಿಸಲಾಗದಷ್ಟ ಬದಲಾಗಿದೆ. ಇದರ ರಚನೆ ಬಳಸಿರುವ ಮಾಧ್ಯಮದಿಂದ ಅಧಿಷ್ಠಾನದ ಮಾದರಿ ದೇವಾಯದ ರೀತಿ, ಎತ್ತರ, ಒಳಗಿನ ಸುರಳಿ (ತರಂಗಗಳು) ಮುಂತಾದ ವಿವರಗಳಿಂದ ಈ ದೇವಾಲಯವನ್ನು ನಾವು ಬಾದಾಮಿ ಚಾಲುಕ್ಯರ ಕಾಲಕ್ಕೆ ಅಂದರೆ ಸುಮಾರು ಎಂಟನೆಯ ಶತಮಾನದ ಆರಂಭ ಕಾಲಕ್ಕೆ ಸೇರಿಸಬಹುದಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಎಲ್ಲಾ ಕಾರಣದಿಂದಾಗಿ ಹಂಪೆಯು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತೆಂದು ಹೇಳಬಹುದು.

## ರಾಷ್ಟ್ರಕೂಟರು

ರಾಷ್ಟ್ರಕೂಟರ ಕಾಲದಲ್ಲಿ ಹಂಪೆಯ ಉಲ್ಲೇಖಿತ ಶಾಸನಗಳು ಯಾವೂ ದೊರತಿಲ್ಲ. ಆದರೆ ಇವರ ಕಾಲದಲ್ಲಿ ವಾಸ್ತು ರಚನೆಗಳು ವಿರೂಪಾಕ್ಷ ದೇವಾಲಯದ ಆವರಣದಲ್ಲಿ ಕಂಡುಬರುತ್ತದೆ. ವಿರೂಪಾಕ್ಷ ದೇವಾಲಯದ ಉತ್ತರ ದಕ್ಷಿಣಕ್ಕಿರುವ ಕನಕಗಿರಿ ಗೋಪುರವನ್ನು ದಾಟಿ ಬಂದರೆ ಅಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲ್ಪಟ್ಟ ಸಣ್ಣ ಸಣ್ಣ ದೇವಾಲಯಗಳು ಕಾಣಬರುತ್ತವೆ. ಅದರಲ್ಲಿ ಎರಡು ದೇವಾಲಯಗಳು ಉಳಿದೆಲ್ಲವುಗಳು ಪ್ರಾಚೀನವಾಗಿದ್ದು ರಾಷ್ಟ್ರಕೂಟರ ಕಾಲಕ್ಕೆ ಸೇರಿದವುಗಳಾಗಿವೆ.[೨೯]

## ಕಲ್ಯಾಣದ ಚಾಲುಕ್ಯರು (ಕ್ರಿ.ಶ. ೯೭೩–೧೧೫೦)

ರಾಷ್ಟ್ರಕೂಟರ ಆಳ್ವಿಕೆಯನ್ನು ಕ್ರಿ.ಶ. ೯೭೩ ರಲ್ಲಿ ಕೊನೆಗಾಣಿಸಿದ ಇಮ್ಮಡಿ ತೈಲಪ ಚಾಲುಕ್ಯ ವಂಶವನ್ನು ಸ್ಥಾಪಿಸಿದನು. ಇವನ ಸಾಮ್ರಾಜ್ಯ ಮುಂದೆ ಎರಡು ಶತಮಾನಗಳ ಕಾಲ ಅಕಂಡ ಕರ್ನಾಟಕದ ಸಂಸ್ಕೃತಿಯನ್ನು ಸಮೃದ್ಧವಾಗಿ ಮುಂದುವರಿಸಿದರು. ಇವರ ಪ್ರಸಿದ್ಧ ಅರಸ ಆರನೇ ವಿಕ್ರಮಾದಿತ್ಯ ಚಾಲುಕ್ಯ ವಿಕ್ರಮಶಕೆಯನ್ನು ಆರಂಭಿಸಿದನು. ಕಲ್ಯಾಣದ ಚಾಲುಕ್ಯರ ಯಾವುದೆ ದೇವಲಯ ಹಾಗೂ ಶಾಸನಗಳು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ದೊರೆತಿಲ್ಲ. ಆದರೆ ಇಡೀ ಕರ್ನಾಟಕವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡು ಆಳ್ವಿಕೆ ಮಾಡಿರುವುದು ತಿಳಿದು ಬರುವುದರಿಂದ ಪ್ರಸ್ತುತ ಅಧ್ಯಯನ ಪರಿಸರದಲ್ಲೂ ಅಪರೂಪವಾಗಿ ಕಲ್ಯಾಣ ಚಾಲುಕ್ಯರಿಗೆ ಈ ಪ್ರದೇಶವು ಸಹ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತೆಂದು ಹೇಳಬಹುದು.

## ನೊಳಂಬರು (ಕ್ರಿ.ಶ. ೭೫೦–೧೦೫೫)

ಕರ್ನಾಟಕದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಡಳಿತ ನಡೆಸಿದ ನೊಳಂಬರು ದಕ್ಷಿಣಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಇವರ

ರಾಜ್ಯಧಾನಿ ಪ್ರಸ್ತುತ ಅಧ್ಯಯನ ಪರಿಸರದ ಗಡಿಪ್ರದೇಶವಾದ ಈಗಿನ ಆಂಧ್ರಪ್ರದೇಶದ ಮಡಕಶಿರ ತಾಲೂಕಿನ ಹೆಂಜೇರು ಆ ನಂತರ ಕ್ರಿ.ಶ. ೧೧ ನೇ ಶತಮಾನದಲ್ಲಿ ಇವರು ಪ್ರಸ್ತುತ ಅಧ್ಯಯನದ ತುಂಗಭದ್ರ ನದಿ ತೀರದಲ್ಲಿರುವ ಕಂಪಲಿಗೆ ವರ್ಗಾಹಿಸಿಕೊಂಡು, ತಮ್ಮದೆ ಆದ ರಾಜಕೀಯ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ವಿಜಯನಗರ ಸಾಮ್ರಾಜ್ಯಕ್ಕೆ ನೀಡಿದ್ದಾರೆ.

**ಹೊಯ್ಸಳರು**

ಹೊಯ್ಸಳ ಇಮ್ಮಡಿ ಸೋಮೇಶ್ವರನ ಕ್ರಿ.ಶ. ೧೨೪೦ ರ ಶಾಸನವು[೩೦] ಹಂಪೆಯ ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿ ಪಶ್ಚಿಮಕ್ಕೆ ಇದೆ. ಈ ಶಾಸನವು ಸೋಮೇಶ್ವರನು ಹೇಮಕೂಟದಲ್ಲಿನ ವಿರೂಪಾಕ್ಷ ದೇವರಿಗೆ ಚಿಕ್ಕಗರಜೆ ಎಂಬ ಗ್ರಾಮವನ್ನು ದಾನ ನೀಡಿ ಅದರ ಆದಾಯದಲ್ಲಿ ಸಲ್ಲಿಸಬೇಕಾದ ಪೂಜಾ ವಿವರಗಳನ್ನು ತಿಳಿಸುತ್ತದೆ. ಇದು ಬಿಟ್ಟರೆ ಹೊಯ್ಸಳರ ಕಾಲದ ದಾಖಲೆಗಳಲ್ಲಿ ಹಂಪೆಯ ಉಲ್ಲೇಖ ಬಂದಿರುವುದಿಲ್ಲ. ಆದರೆ ಮುಂದೆ ಬಂದು ವಿಜಯನಗರದ ಸಾಮ್ರಾಜ್ಯ ಸ್ಥಾಪಕರಾದ ಹರಿಹರ-ಬುಕ್ಕರು ಹೊಯ್ಸಳ ಮುಮ್ಮಡಿ ಬಲ್ಲಾಳನ ಮಹಾಮಂಡಲೇಶ್ವರರಾಗಿಯೇ ಸಾಮ್ರಾಜ್ಯ ಸ್ಥಾಪಿಸಿ ಹೊಯ್ಸಳರ ಪರಂಪರೆಯನ್ನು ಮುಂದುವರೆಸಿದರು ಎಂಬ ಅಂಶಗಳು ಚರಿತ್ರೆಯ ಅಧ್ಯಯನಗಳೆಂದು ತಿಳಿದು ಬರುತ್ತದೆ.

**ಹೊಸಮಲೆ ದುರ್ಗದ ಅರಸರು**

ಹಂಪೆಯಲ್ಲಿ ವಿಜಯನಗರ ಆಳ್ವಿಕೆಯ ಪೂರ್ವದಲ್ಲಿ ಮುಮ್ಮಡಿ ಸಿಂಗೆಯ ನಾಯಕನ ಮಗನಾದ ಕಂಪಿಲದೇವನ ಆಳ್ವಿಕೆ ಇತ್ತು. ಕುಮ್ಮಟದ ಅರಸರ ಕುರಿತು ತಿಳಿಯಲು ಸಾಹಿತ್ಯ ಕೈಫಿಯತ್ತು ಶಾಸನಗಳು ಸಹಾಯವಾಗಿವೆ. ಕುಮ್ಮಟದುರ್ಗ ಮತ್ತು ಹೊಸಮಲೆ ದುರ್ಗಗಳೆರಡನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ಇವರ ಕಾಲದ ಪ್ರಮುಖ ಅರಸ ಕುಮಾರರಾಮ ಅಥವಾ ರಾಮನಾಥ ಕ್ರಿ.ಶ. ೧೩೨೭ ರಲ್ಲಿ ದೆಹಲಿಯ ಮಹಮ್ಮದ ಬಿನ್ ತುಘಲಕನ ಸೈನ್ಯ ಕುಮ್ಮಟದ ಮೇಲೆ ದಾಳಿ ಮಾಡಿತು. ಈ ದಾಳಿಯಲ್ಲಿ ಕಂಪಿಲದೇವ ಹಾಗೂ ಅವನ ಮಗನಾದ ರಾಮನಾಥ ಮರಣ ಹೊಂದಿದರು.[೩೧] ಕುಮಾರರಾಮ ತನ್ನ ಶೌರ್ಯ ಮತ್ತು ಆದರ್ಶ ಗುಣಗಳಿಂದ ದೈವತ್ವದ ಸ್ಥಾನ ಪಡೆದಿರುವನು. ಶಾಸನಗಳು ಈತನ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿ ಪೂಜಿಸಿದ ಬಗ್ಗೆ ತಿಳಿಸುತ್ತದೆ.

**ರಾಜಕೀಯ ಇತಿಹಾಸ**

**೧. ಸಂಗಮ ವಂಶ (೧೩೩೬–೧೪೮೫)**

೧. ಹರಿಹರ (೧೩೩೬–೫೬)

೨. ಒಂದನೇಯ ಬುಕ್ಕರಾಯ (೧೩೫೬–೭೭)

೩. ಇಮ್ಮಡಿ ಹರಿಹರ (೧೩೭೭-೧೪೦೪)

೪. ಒಂದನೇಯ ದೇವರಾಯ (೧೪೦೬-೨೨)

೫. ಎರಡನೇ ದೇವರಾಯ (೧೪೨೪-೧೪೪೬)

**೨. ಸಾಳುವ ವಂಶ (೧೪೮೫-೧೫೦೫)**

೧. ಸಾಳುವ ನರಸಿಂಹ ( ೧೪೮೫-೧೫೦೫)

**೩. ತುಳುವ ವಂಶ (೧೫೦೫-೧೫೫೫)**

೧. ಕೃಷ್ಣದೇವರಾಯ (೧೫೦೯-೨೯)

೨. ರಾಮರಾಯ

೩. ಸದಾಶಿವರಾಯ

**೪. ಅರವೀಡು ವಂಶ (೧೫೫೫-೧೬೪೬)**

೧. ತಿರುಮಲ (೧೫೭೦-೭೮)

೨. ಇಮ್ಮಡಿ ಶ್ರೀರಂಗರಾಯ (೧೫೭೮-೮೬)

೩. ಒಂದನೇ ವೆಂಕಟಪತಿರಾಯ (೧೫೮೬-೧೬೧೪)

ದಕ್ಷಿಣ ಭಾರತದ ಇತಿಹಾಸದಲ್ಲಿ ಸು. ೩ ಶತಮಾನಗಳಿಗೂ ಹೆಚ್ಚು ಕಾಲ (೧೪-೧೭ ನೆಯ ಶತಮಾನ) ಆಳ್ವಿಕ ನಡೆಸಿ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಪೋಷಿಸಿದ ವಿಶಾಲ ಸಾಮ್ರಾಜ್ಯ. ಸಂಗಮ ವಂಶದ ಸಹೋದರರಾದ ಹರಿಹರ, ಬುಕ್ಕರು ೧೩೩೬ ರಲ್ಲಿ ಈ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರ ಕಿರಿಯ ಸೋದರರಾದ ಕಂಪಣ, ಮಾರಪ್ಪ ಮತ್ತು ಮುದ್ದಪ್ಪ ಇವರಿಗೆ ಬೆಂಬಲ ನೀಡಿದರು. ಮಹಮದ್ ಬಿನ್ ತುಘಲಕ್‌ನ ದಾಳಿಗಳಿಗೆ ದಕ್ಷಿಣದ ದೇವಗಿರಿಯ ಸೇವುಣ, ವಾರಂಗಲ್‌ನ ಕಾಕತೀಯ ಹಾಗೂ ಹೊಯ್ಸಳ ರಾಜ್ಯಗಳು ಒಳಗಾದವು.

ದಖನ್ನಿನ ರಾಜಕೀಯ ಅನೈಕ್ಯತೆ ಮತ್ತು ಶೂನ್ಯವನ್ನು ಹೋಗಲಾಡಿಸಿದ ವಿಜಯನಗರ ಸಾಮ್ರಾಜ್ಯ ಹಿಂದೂ ಧರ್ಮದ ರಕ್ಷಣಾ ಕೋಟೆಯಂತೆ ರಕ್ಷಿಸಿ ಪ್ರೋತ್ಸಾಹಿಸಿತು. ಆಡಳಿತ ಕ್ಷೇತ್ರಗಳಲ್ಲಿ ಹೊಸರೂಪ ತಂದಿತು. ವಿದೇಶಿಯರ ದಾಳಿಗಳಿಂದ ನಾಡನ್ನು ರಕ್ಷಿಸಿದ್ದರಿಂದಲೇ ಈ ವಂಶಕ್ಕೆ ವಿಜಯನಗರದ ಅರಸರೆಂಬ ಹೆಸರಾಯಿತೆಂದು ಪ್ರತೀತಿ. ತುಂಗಭದ್ರನದಿ ದಂಡೆಯ ಹಂಪಿ ಇದರ ರಾಜಧಾನಿ. ಇಮ್ಮಡಿ ದೇವರಾಯ, ಕೃಷ್ಣದೇವರಾಯ, ರಾಮರಾಯ ಈ ಸಾಮ್ರಾಜ್ಯದ ಪ್ರಮುಖ ಅರಸರು. "ವರಾಹ" ಇವರ ರಾಜ್ಯ ಲಾಂಛನ, ದಖನ್ನಿನ ಕಟ್ಟಕಡೆಯ

ಬಲಿಷ್ಠ ಸಾಮ್ರಾಜ್ಯವಾಗಿ ಮೆರೆದ ಇದರ ಸಾಧನೆಗಳು ಅಪೂರ್ವ. ರಾಬರ್ಟ್‌ಸಿವೆಲ್ ಬರೆದಿರುವ 'ದಿ ಫರ್ಗಾಟನ್ ಎಂಪೈರ್' (ಮೆರತು ಹೋದ ಸಾಮ್ರಾಜ್ಯ) ಎಂಬ ಕೃತಿ ಈ ಸಾಮ್ರಾಜ್ಯದ ಹಿರಿಮೆಯನ್ನು ತಿಳಿಸುತ್ತದೆ.[೩೨]

**ರಾಜಕೀಯ ಇತಿಹಾಸ**

ವಿಜಯನಗರ ಸಾಮ್ರಾಜ್ಯ ಮೂಲತಃ ಹರಿಹರ, ಬುಕ್ಕರಾಯ, ಕಂಪಣರಾಯ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐದು ಮಂದಿ ಸಂಗಮ ಸಹೋದರರದಿಂದ ಸಂಘಟಿಸಲ್ಪಟ್ಟಿತ್ತಾದರೂ ವಾಸ್ತವಿಕವಾಗಿ ಹರಿಹರ ಮತ್ತು ಬುಕ್ಕರಾಯ ರಾಜ್ಯದ ಸ್ಥಾಪಕರೆಂದು ಕರೆಯಲಾಗುತ್ತದೆ. ಈ ಸಾಮ್ರಾಜ್ಯವನ್ನು ಕಾಲಾನುಕ್ರಮದಲ್ಲಿ ೪ ರಾಜವಂಶಗಳು ಆಳಿದವು.

೧. ಸಂಗಮ ವಂಶ (೧೩೩೬–೧೪೮೫)

೨. ಸಾಳುವ ವಂಶ (೧೪೮೫–೧೫೦೩)

೩. ತುಳು ವಂಶ (೧೫೦೩–೧೫೫೫)

೪. ಅರವೀಡು ವಂಶ (೧೫೫೫–೧೬೪೬)[೩೩]

**ಸಂಗಮ ವಂಶ (೧೩೩೬–೧೪೮೫)**

**ಹರಿಹರ – (೧೩೩೬–೫೬)**

ಸಂಗಮ ವಂಶದ ಮೊದಲ ದೊರೆ. ಇವನು ತನ್ನ ಸೋದರರ ನೆರವಿನಿಂದ ರಾಜ್ಯ ಕಟ್ಟಿದ. ಹೊಯ್ಸಳರ ಸಾಮಂತರಾಗಿ ಅವರ ಅನೇಕ ಸಣ್ಣಪುಟ್ಟ ಸಾಮಂತರನ್ನು ಸೋಲಿಸಿ ರಾಜ್ಯ ವಿಸ್ತರಿಸಿದ. ೧೩೩೬ ರಲ್ಲಿ ಬರಕೂರ ಮತ್ತು ೧೩೪೦ ರಲ್ಲಿ ಬಾದಾಮಿ ಕೋಟೆಗಳನ್ನು ನಿರ್ಮಿಸಿದ. ೧೩೪೨ ರಲ್ಲಿ ಮುಮ್ಮಡಿ ಬಲ್ಲಾಳ ಕೊಲೆಯಾದ ಈ ಆರು ವರ್ಷಗಳಲ್ಲಿ ರಾಜ್ಯವನ್ನು ಬಲಪಡಿಸುವ ಕಾರ್ಯದಲ್ಲಿ ಹರಿಹರ ನಿರತನಾಗಿದ್ದ. ದ್ವಾರಸಮುದ್ರದ ಸುತ್ತಲಿನ ಪ್ರದೇಶವನ್ನು ಆಳುತ್ತಿದ್ದ ಕಂಪಣನು ಉದಯಗಿರಿ ರಾಜ್ಯದಲ್ಲೂ, ಮಾರಪ್ಪನೂ ಪಶ್ಚಿಮ ತೀರದ ಮಲೆರಾಜ್ಯದಲ್ಲೂ, ಮುದ್ದಪ್ಪ ಮುಳಬಾಗಲಿನ ಸುತ್ತಲ ಪ್ರದೇಶದಲ್ಲಿಯೂ ಅಧಿಕಾರದಲ್ಲಿದ್ದರು. ೧೩೪೭ ರಲ್ಲಿ ಗುಲ್ಬರ್ಗಾದಲ್ಲಿ ಬಹಮನಿ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಅಲ್ಲಾವುದ್ದೀನ್ ಬಹಮನ್ ಷಾ ಎಂದು ಬಿರುದಾಂಕಿತನಾದ ಹಸನ್ ಅಥವಾ ಜಾಫರ್ ಖಾನನು ಇದರ ಸಂಸ್ಥಾಪಕ. ಇದೊಂದು ವಿಶೇಷವಾದ ಘಟನೆ. ಈ ರಾಜ್ಯ ಅನಂತರದ ಶತಮಾನಗಳಲ್ಲಿ ನೆರೆಯ ವಿಜಯನಗರ ರಾಜ್ಯದೊಡನೆ ಸತತವಾಗಿ ಕದನಗಳಲ್ಲಿ ತೊಡಗಿತ್ತು. ೧೩೪೭ ರ ಸುಮಾರಿಗೆ ಅಸ್ತಿತ್ವಕ್ಕೆ ಬಂದ ಬಹಮನಿ ರಾಜ್ಯದ ಸುಲ್ತಾನರು ವಿಜಯನಗರದ ಪ್ರತಿಸ್ಪರ್ಧಿಗಳಾಗಿದ್ದರು. ದಕ್ಷಿಣದಲ್ಲಿ ಮಧುರೆಯ ಸುಲ್ತಾನರು ಕಂಟಕಪ್ರಾಯರಾಗಿದ್ದರು. ಇವರನ್ನು ಹೊರತುಪಡಿಸಿ,

ಇತರ ಮಾಂಡಲಿಕರು, ಸಾಮಂತರು ಹರಿಹರನ ಸಾರ್ವಭೌಮತ್ವವನ್ನು ಒಪ್ಪಿದರು. ೧೩೫೬ ರಲ್ಲಿ ಹರಿಹರನ ಸೋದರನಾದ ೧ನೇಯ ಬುಕ್ಕರಾಯ (೧೩೫೬-೭೭) ಪಟ್ಟಾಭಿಷಿಕ್ತನಾದ.

**ಒಂದನೆಯ ಬುಕ್ಕರಾಯ – (೧೩೫೬-೭೭)**

ಎರಡು ದಶಕಗಳ ಕಾಲ ಅಧಿಕಾರದಲ್ಲಿ ಮುಂದುವರಿದು ರಾಜ್ಯವನ್ನು ವಿಸ್ತರಿಸಿ ಬಲಪಡಿಸಿದ. ಬುಕ್ಕನು ದಕ್ಷ ಆಡಳಿತಗಾರನಾಗಿದ್ದ. ಇವನು ಸಿಂಹಳ ಹಾಗೂ ಚೀನಾದ ಮಿಂಗ್ ದೊರೆಗಳ ಬಳಿಗೆ ರಾಯಭಾರಿಗಳನ್ನು ಕಳುಹಿಸಿದ. ಪರಧರ್ಮ ಸಹಿಷ್ಣುನಾದ ಇವನು ಜೈನ ಮತ್ತು ವೈಷ್ಣವರ ಮಧ್ಯೆ ಜಗಳ ನಿಲ್ಲಿಸಿದ. ಬುಕ್ಕರಾಯನ ಕಾಲದಲ್ಲಿ ಬಹಮನಿ ರಾಜ್ಯದೊಡನೆ ಕದನಗಳು ಆರಂಭವಾಗಿ ತೀವ್ರ ಸ್ವರೂಪವನ್ನು ತಾಳಿದವು. ಭಿನ್ನಧರ್ಮಗಳಿಗೆ ಸೇರಿದ ಈ ರಾಜ್ಯಗಳ ನಡುವಣ ಕಲಹಗಳು ಕೇವಲ ಧಾರ್ಮಿಕವಾಗಿರದೆ ತುಂಗಭದ್ರಾ-ಕೃಷ್ಣ ನದಿಗಳ ನಡುವಣ ಫಲವತ್ತಾದ ಪ್ರದೇಶವನ್ನು ಆಕ್ರಮಿಸುವ ಹೋರಾಟವು ಆಗಿತ್ತು. ಎರಡು ಕಡೆಯವರೂ ರಾಯಚೂರು ದೊ-ಆಬ್‌ನ ಕೆಲವು ಭಾಗಗಳನ್ನು ತಮ್ಮದಾಗಿ ಮಾಡಿಕೊಂಡಿದ್ದರೂ ಅಲ್ಲಿಯ ಎಲ್ಲ ಪ್ರದೇಶವನ್ನು ಆಕ್ರಮಿಸಬೇಕೆಂಬ ಆಸೆ ಅವರೀರ್ವರೂ ನಿರಂತರ ಕದನಗಳಲ್ಲಿ ತೊಡಗುವತೆ ಮಾಡಿತು. ಬುಕ್ಕನನ್ನು ಬಹಮನಿಯ ಮಹಮ್ಮದ್ ಷಾ ಕಾಡು ಮೇಡುಗಳಲ್ಲಿ ಆರು ತಿಂಗಳುಗಳ ಕಾಲ ಬೆನ್ನಟ್ಟಿ ಆತ ರಾಮೇಶ್ವರದವರೆಗೂ ಅಲೆಯುವತೆ ಮಾಡಿದನೆಂಬುದು ಇಂಥ ಒಂದು ಹೇಳಿಕೆ. ವಾಸ್ತವವಾಗಿ ಬಹಮನಿ ಅರಸರಾಗಲೀ, ವಿಜಯನಗರದ ಅರಸರಾಗಲೀ ಖಚಿತವಾದ ಅಂತಿಮವೆನಿಸಬಹುದಾದ ಜಯವನ್ನು ಪಡೆಯಲೇ ಇಲ್ಲ. ಅಂಥ ಘಟನೆ ನಡೆದುದು ಎರಡು ಶತಮಾನಗಳ ಆನಂತರ ನಡೆದ ರಕ್ಕಸಗಿ-ತಂಗಡಗಿ ಕದನದಲ್ಲಿ ಮಾತ್ರ. ಈ ಹೋರಾಟ ಧಾರ್ಮಿಕವಾಗಿರಲಿಲ್ಲ ಎಂಬ ವಾದವನ್ನು ಒಪ್ಪಲಾಗದು. ವಾಸ್ತವವಾಗಿ ಮಹಮದೀಯ ಅರಸರು ಹಿಂದೂ ಧರ್ಮವನ್ನು ಅಲ್ಲಗಳೆದು ತಮ್ಮ ಮತವನ್ನು ಬಲವಂತವಾಗಿ ಪ್ರಜೆಗಳ ಮೇಲೆ ಹೇರುವ ಯತ್ನ ಮಾಡಿದ್ದರು.

ಉತ್ತರ ಭಾರತದಲ್ಲಿ ಈ ಯತ್ನಗಳನ್ನು ತಡೆಗಟ್ಟಲು ಸರಿಸಮನಾದ ಬಲ ಯಾವ ರಾಜನಿಗೂ ಇರಲಿಲ್ಲ. ದಕ್ಷಿಣದಲ್ಲಿ ತಡವಾಗಿಯಾದರೂ ತಮ್ಮ ಧರ್ಮಕ್ಕೆ ಚ್ಯುತಿಬಂದಿದೆ ಎಂಬುದನ್ನು ಮನಗಂಡ ಅರಸರು, ಸಾಮಂತರು, ಪ್ರಜೆಗಳು ದೃಢಮನಸ್ಸಿನಿಂದ ಒಗ್ಗಟ್ಟಾಗಿ ಅದನ್ನು ತಡೆಯುವ, ಧರ್ಮರಕ್ಷಣೆ ಮಾಡಿಕೊಳ್ಳುವ ಕಾರ್ಯದಲ್ಲಿ ತೊಡಗಿದರು ಎಂತಲೇ ಈ ಕಾಲದಲ್ಲಿ ಸಾಹಿತ್ಯ, ಸಂಗೀತ, ಕಲೆ, ವಾಸ್ತುಶಿಲ್ಪಗಳಲ್ಲಿ ಧರ್ಮಕ್ಕೆ ಹೆಚ್ಚಿನ ಪ್ರಾಧಾನ್ಯ ಕೊಡಲಾಯಿತು. ಬುಕ್ಕನು ಸಾಯಣಾಚಾರ್ಯ ಮತ್ತು ಮಾಧವಾಚಾರ್ಯರ ನೇತೃತ್ವದಲ್ಲಿ ವೇದಗಳಿಗೆ ಭಾಷ್ಯಗಳನ್ನು ಬರೆಸುವ ಯೋಜನೆಯನ್ನು ೧೩೬೦ ರಲ್ಲಿ ಕಾರ್ಯಗತ ಮಾಡಿದುದು ಇಂಥ ಮನೋಭಾವದಿಂದಲೇ.

ಈ ದೃಷ್ಟಿಯಿಂದ ಬುಕ್ಕನು ಕಾಕತೀಯ ಪ್ರತಾಪರುದ್ರನ ಮೊಮ್ಮಗನಾದ ವಿನಾಯಕದೇವನೊಡನೆ ಸ್ನೇಹ ಸಂಬಂಧಗಳನ್ನು ಬೆಳೆಸಿದ. ಇಬ್ಬರೂ ಕೂಡಿ ದೆಹಲಿ ಸುಲ್ತಾನನಾಗಿದ್ದ ಫಿರೋಜನ ಆಸ್ಥಾನಕ್ಕೆ ಪ್ರತಿನಿಧಿಗಳಣ್ನು ಕಳಿಸಿದರು. ಆದರೆ ಸ್ವತಃ ಸುಲ್ತಾನನೇ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಲುಕಿದ್ದ, ಕಾರಣ ಈ ನಿಯೋಗ ಏನೂ ಸಾಧಿಸಲಿಲ್ಲ. ಮಹಮ್ಮದ್ ವಾರಂಗಲ್ಲನ್ನು ಮುತ್ತಿ ವಿನಾಯಕದೇವನನ್ನು ಕೊಂದು, ಇನ್ನೊಮ್ಮೆ ಗೋಲ್ಕಂಡವನ್ನು ಆಕ್ರಮಿಸಿದ. ಆಂಧ್ರದಲ್ಲಿನ ಪೋಲನಾಯಕ, ಕಾಂಪಕನಾಯಕ ಮೊದಲಾದ ನಾಯಕರು ಕೆಲಕಾಲ ಧೈರ್ಯದಿಂದ ಶತ್ರುವನ್ನು ಎದುರಿಸಿ ಸ್ವತಂತ್ರರಾದರು.

ರಾಜ್ಯವನ್ನು ಬಲಪಡಿಸಲು ಬುಕ್ಕ ಹಲವಾರು ಕ್ರಮಗಳನ್ನು ಕೈಗೊಂಡ. ರಾಜಧಾನಿಯಾದ ಹಂಪೆಯ ಸುತ್ತಲೂ ಕೋಟೆಯನ್ನು ಕಟ್ಟಿಸಿ ಪ್ರಜೆಗಳ ವಾಸಕ್ಕೆ ಹೆಚ್ಚು ಅನುಕೂಲಗಳನ್ನು ಕಲ್ಪಿಸಿದ. ವ್ಯವಸಾಯ, ವ್ಯಾಪಾರಗಳಿಗೆ ಉತ್ತೇಜನ ನೀಡಿದ. ಸಿಂಹಳದ ಅರಸರು, ಮಲಬಾರಿನ ನಾಯಕರು ಅರಸನ ಆಸ್ಥಾನಕ್ಕೆ ಬುಕ್ಕ ೧೩೭೪ ರಲ್ಲಿ ರಾಯಭಾರಿಗಳನ್ನು ಕಳಿಸಿದ. ಬುಕ್ಕನ ಮಕ್ಕಳಾದ ವಿರೂಪಾಕ್ಷ ಮತ್ತು ಭಾಸ್ಕರರು ಆರಗ ಮತ್ತು ಮುಳುವಾಯಿ (ಮುಳುಬಾಗಿಲು) ಪ್ರಾಂತಾಧಿಕಾರಿಗಳಾದರು. ಸೋದರನಾದ ಕಂಪಣ್ಣ ತಮಿಳು ದೇಶದಲ್ಲಿ ಅಧಿಕಾರ ವಹಿಸಿದ. ರಾಷ್ಟ್ರದ ಹಿತಕ್ಕಾಗಿ ಪ್ರಜೆಗಳು ತಮ್ಮ ತಮ್ಮ ಜಾತಿಧರ್ಮಗಳಲ್ಲಿಯ ವೈಷಮ್ಯಗಳನ್ನು ತೊಡೆದು ಶಾಂತಿಯುತ ಸಹಜೀವನ ನಡೆಸುವುದು ಅವಶ್ಯಕವಾಗಿತ್ತು. ಶ್ರವಣಬೆಳಗೊಳದಲ್ಲಿ ಜೈನರಿಗೂ ಶ್ರೀ ವೈಷ್ಣವರಿಗೂ ಕಲಹವಾದಾಗ ಅರಸನು ಅವರನ್ನು ಸಮಾಧಾನಗೊಳಿಸಿ ಎಲ್ಲ ಧರ್ಮಗಳೂ ಒಂದೇ, ಯಾವುದನ್ನು ಯಾರೊಬ್ಬರೂ ತೆಗಳಬಾರದು ಎಂದು ಅವರಿಗೆ ಉಪದೇಶ ನೀಡಿ ಅವರನ್ನು ಸಾಂತ್ವಾನಗೊಳಿಸಿದ. ಇದು ಅಂದಿನ ಅರಸರ ಧಾರ್ಮಿಕ ನೀತಿಗೆ ಸಾಕ್ಷಿಯಾಗಿದೆ.

**ಇಮ್ಮಡಿ ಹರಿಹರ – (೧೩೭೭–೧೪೦೪)**

೧೩೭೭ ರಲ್ಲಿ ಇವನು ತಂದೆಯ ಉತ್ತರಾಧಿಕಾರಿಯಾಗಿ ಆಡಳಿತ ಸೂತ್ರವಹಿಸಿದ. ೧೩೭೪ ರಲ್ಲಿ ಕಂಪಣ ನಿಧನನಾದ ಬಳಿಕ ತಮಿಳುನಾಡಿನಲ್ಲಿ ತುಂಡೀರ, ಚೋಳ ಮತ್ತು ಪಾಂಡ್ಯ ದೇಶಗಳ ಮಾಂಡಲಿಕರು ದಂಗೆ ಎದ್ದಿದ್ದರು. ಈ ಬಾರಿ ಹರಿಹರನ ಸೋದರನಾದ ವಿರೂಪಾಕ್ಷ ಅಲ್ಲಿಗೆ ಹೋಗಿ ದಂಗೆಗಳನ್ನು ಅಡಗಿಸಿ, ಅಂತಿಮವಾಗಿ ಮಧುರೆಯ ಸುಲ್ತಾನನ್ನು ಸೋಲಿಸಿ ಹೊರದೂಡಿ ಸಿಂಹಳ ದ್ವೀಪದವರೆಗೂ ಹೋಗಿ ಅಲ್ಲಿಯ ಅರಸನಾದ ಭುವನೈಕ ಬಾಹುವಿನಿಂದ ಕಪ್ಪವನ್ನು ಪಡೆದ. ೧೩೯೧ ರಲ್ಲಿ ಉತ್ತರದಲ್ಲಿ ಚೌಲ್, ಧಬೋಲ್ ಮತ್ತು ಖಾರೇ ಪಟ್ಟಣಗಳು ವಿಜಯನಗರದ ವಶವಾದವು. ಇದರ ಫಲವಾಗಿ ಸಾಮ್ರಾಜ್ಯ ಕೃಷ್ಣತೀರದವರೆಗೂ ವಿಸ್ತರಿಸಿದಂತಾಯಿತು. ಬಹಮನಿಯ ಫಿರೋಜ್ ಷಾ ಕದನ ಹೂಡಿದನಾದರೂ ಫಲಿತಾಂಶ ಶೂನ್ಯ.

ಅರಸನು ರಾಜ್ಯದ ಆರ್ಥಿಕಾಭಿವೃದ್ಧಿಗಾಗಿ ಹಲವಾರು ನೀರಾವರಿ ಯೋಜನೆಗಳನ್ನು ಕೈಗೊಂಡು ನದಿಗಳಿಗೆ ಆಣೆಕಟ್ಟನ್ನು ಕಟ್ಟಿ, ಕಾಲುವೆಗಳನ್ನು ತೋಡಿಸಿದ. ಸಂಗಮಭಟ್ಟನೆಂಬಾತ ಅಂದಿನ ಖ್ಯಾತ ವಾಸ್ತುಶಿಲ್ಪಿ ಪೆನುಗೊಂಡೆಗೆ ನೀರನ್ನು ಒದಗಿಸಲು ಹೊನ್ನೆ ನದಿಯಿಂದ ಕಾಲುವೆಯೊಂದನ್ನು ಈತ ತೋಡಿಸಿದ. ಬುಕ್ಕ ಆರಂಭಿಸಿದ್ದ ವೇದಗಳಿಗೆ ಭಾಷ್ಯವನ್ನು ಬರೆಸುವ ಯೋಜನೆ ಹರಿಹರನ ಕಾಲದಲ್ಲಿ ಪೂರ್ಣಗೊಂಡಿತು. ಕನ್ನಡ ಮತ್ತು ಸಂಸ್ಕೃತ ಭಾಷೆ ಸಾಹಿತ್ಯಗಳಿಗೆ ಈತ ವಿಶೇಷ ಪ್ರೋತ್ಸಾಹ ನೀಡಿ, ಕರ್ನಾಟಕ ವಿದ್ಯಾವಿಲಾಸವೆನಿಸಿಕೊಂಡ. ಜೈನ ಹಾಗೂ ವೀರಶೈವ ಕೃತಿಗಳು ಆಗ ಬೆಳಕಿಗೆ ಬಂದವು.

೧೪೦೪ ರಲ್ಲಿ ಹರಿಹರ ಮಡಿದ, ಸಿಂಹಾಸನಕ್ಕಾಗಿ ಬುಕ್ಕ-೨ ಮತ್ತು ವಿರೂಪಾಕ್ಷರ ನಡುವೆ ಸ್ಪರ್ಧೆ ಏರ್ಪಟ್ಟಿತು. ಬುಕ್ಕ ಜಯಶಾಲಿಯಾದರೂ ಬಹುಕಾಲ ಬಾಳಲಿಲ್ಲ. ೧೪೦೬ ರಲ್ಲಿ ರಾಜ್ಯ ಸೂತ್ರಗಳನ್ನು ವಹಿಸಿದ.

**ಒಂದನೆಯ ದೇವರಾಯ – (೧೪೦೬-೨೨)**

ಬಹಮನಿ ಸುಲ್ತಾನನಾದ ಫಿರೋಜನೊಡನೆ ಸತತವಾಗಿ ಕಾದಾಡಬೇಕಾಯಿತು. ಮುದಗಲ್ಲಿನ ಅಕ್ಕಸಾಲಿಗೊಬ್ಬನ ಮಗಳಲ್ಲಿ ಈತ ಅನುರಕ್ತನಾದನೆಂದೂ ಆಕೆಯ ರಕ್ಷಣೆಗಾಗಿ ಫಿರೋಜ್ ವಿಜಯನಗರವನ್ನು ಮುತ್ತಿದನೆಂದೂ ಫೀರೋಜನ ಮಗ ದೇವರಾಯನ ಮಗಳನ್ನು ಮದುವೆಯಾದನೆಂದೂ ಫೆರಿಸ್ತನ ಹೇಳಿಕೆ. ಇದೊಂದು ಕಟ್ಟುಕತೆ ಕೊಂಡವೀಡಿನ ರೆಡ್ಡಿ ಮನೆತನದ ಪೆದಕೋಮಟಿವೇಮನು ಉದಯಗಿರಿಯನ್ನು ಮುತ್ತಿದನಾದರೂ ದೇವರಾಯ ಅವನನ್ನು ಅಲ್ಲಿಂದ ಹೊರದೂಡಿದ. ಅನಂತರ ವೇಮನ ರಾಜಮೆಂದ್ರಿಯ ಕಾಟಯವೇಮನ ವಿರುದ್ಧ ದಂಡೆತ್ತಿದ. ಕಾಟಯನು ದೇವರಾಯನ ಮೈದುನ ಎಂತಲೇ ದೇವರಾಯನು ಅವನ ನೆರವಿಗೆ ಧಾವಿಸಿದ. ಆದರೆ ಸ್ವಲ್ಪಕಾಲದ ಅನಂತರ ಬಹಮನಿ ಸುಲ್ತಾನನ ನೆರವಿನಿಂದ ಪೆದಕೋಮಟೆಯ ಕಾಟಯವೇಮನನ್ನು ಸೋಲಿಸಿ ಕೊಂದನಾದರೂ ಕಾಟಯನ ಮಂತ್ರಿಯಾದ ಅಲ್ಲಾಡ ೧೪೧೫ ರ ಸುಮಾರಿನಲ್ಲಿ ಶತ್ರುವನ್ನು ಹಿಮ್ಮೆಟ್ಟಿಸುವುದರಲ್ಲಿ ಯಶಸ್ವಿಯಾದ. ಇವುಗಳ ಪರಿಣಾಮವಾಗಿ ಒರಿಸ್ಸಾದಲ್ಲಿ ಆಳುತ್ತಿದ್ದ ಗಜಪತಿ ವಂಶದ ಭಾನುದೇವ ದೇವರಾಯನ ಶತ್ರುನಾದ. ದಕ್ಷಿಣ ದಿಗ್ವಿಜಯಗಳಿಗೆ ದೇವರಾಯನಿಂದ ಅಡಚಣೆಯುಂಟಾಗುವುದೆಂಬುದು ಇದಕ್ಕೆ ಕಾರಣವಾಯಿತು.

ದೇವರಾಯ ಸಹ ತನ್ನ ತಂದೆಯಂತೆ ನೀರಾವರಿ ಯೋಜನೆಗಳನ್ನು ಹಾಕಿಕೊಂಡು ತುಂಗಭದ್ರೆಯಿಂದ ರಾಜಧಾನಿಗೆ ಎತ್ತರವಾದ ಕಲ್ಲಿನ ಕಾಲುವೆಯನ್ನು ಕಟ್ಟಿಸಿದನಲ್ಲದೆ ಆಣೆಕಟ್ಟೊಂದನ್ನು ಸಹ ನಿರ್ಮಿಸಿದ. ಹರಿಹರದ ಸಮೀಪದ ಹರಿದ್ರಾನದಿಗೂ ಒಂದು ನೀರಾವರಿ ಕಟ್ಟೆಯನ್ನು ಕಟ್ಟಿಸಿದ. ಸಾಹಿತ್ಯ ಕಳೆಗಳಿಗೆ ಪ್ರೋತ್ಸಾಹ ನೀಡಿದ. ಶೃಂಗೇರಿಯ ಚಂದ್ರಶೇಖರ ಭಾರತಿ ಈತನ ಗುರುಗಳಾಗಿದ್ದರು. ಒಂದು ಸಂದರ್ಭದಲ್ಲಿ ಅರಸನ ಜೀವವನ್ನು ಉಳಿಸಿದನು. ೧೪೨೨ ರಲ್ಲಿ

ದೇವರಾಯ ನಿಧನನಾದ. ೧೪೨೪ ರಲ್ಲಿ ಆತನ ಮೊಮ್ಮಗ ಇಮ್ಮಡಿದೇವರಾಯ, ಪ್ರೌಢದೇವರಾಯ, ಪ್ರತಾಪದೇವರಾಯ, ಅಭಿನವ ವೀರದೇವರಾಯ ಈತನ ಇತರ ಹೆಸರುಗಳು. ಗಜಬೇಂಟೆಕಾರ ಎಂಬುದು ವಿಶಿಷ್ಟವಾದ ಬಿರುದು.

ಕೇರಳ, ಸಿಂಹಳ, ಪುಲಿಕಾಡು, ಪೆಗು ಮತ್ತು ಬರ್ಮದ ಅರಸರು ಈತನಿಗೆ ಕಪ್ಪವನ್ನು ಸಲ್ಲಿಸಿದರೆಂದು ಈತನ ಕಾಲದಲ್ಲಿ ಪರ್ಷಿಯದಿಂದ ಬಂದ ರಾಯಭಾರಿಯಾದ ಅಬ್ದುಲ್ ರಜಾಕ್ (೧೪೪೩) ಬರೆದಿದ್ದಾನೆ. ಇಟಲಿಯಿಂದ ಬಂದ ನಿಕೊಲೊ ಡಿ ಕೊಂಟಿ (೧೪೩೦-೨೧) ಇನ್ನೊಬ್ಬ ಯಾತ್ರಿಕ. ಅಬ್ದುಲ್ ರಜಾಕ್ ಎಂಬಾತ ಇದೇ ಸುಮಾರಿನಲ್ಲಿ ಭಾರತದಲ್ಲಿ ಪ್ರವಾಸ ಮಾಡಿದ. ಪರ್ಷಿಯ ದೇಶದ ಯಾತ್ರಿ, ಈತ ೧೪೧೪ ರಲ್ಲಿ ಹಖ್‌ಷಾನ ರಾಯಭಾರಿಯಾಗಿ ವಿಜಯನಗರಕ್ಕೆ ಬಂದ. ಕಲ್ಲಿಕೋಟೆಯಲ್ಲಿ ಇಳಿದು ಅಲ್ಲಿನ ಜಾಮೋರಿಯನ್ನು ಕಂಡು ಅಹಂತರ ಮಂಗಳೂರು ಮಾರ್ಗವಾಗಿ ವಿಜಯನಗರಕ್ಕೆ ಬಂದ. ಈತ ಭಾರತದಲ್ಲಿ ಸುಮಾರು ಎರಡು ವರ್ಷ ಇದ್ದು, ೧೪೪೩ ರಲ್ಲಿ ಹೊನ್ನಾವರದಲ್ಲಿ ಹಡಗನ್ನು ಹತ್ತಿ ಓರ್ಮಜ್‌ಗೆ ಹಿಂದಿರುಗಿದ. ಈತ ತನ್ನ ಪ್ರವಾಸಕಥನವನ್ನು ಮತ್ಲಅಸ್ ಸದೈನ್ ಎಂಬ ಗ್ರಂಥದಲ್ಲಿ ಬರೆದಿದ್ದಾನೆ.[೩೪]

## ಸಾಳುವ ವಂಶ

### ಸಾಳುವ ನರಸಿಂಹ – (೧೪೮೫–೧೫೦೫)

ಸಾಳುವ ವಂಶದ ನರಸಿಂಹನು ಹೊಸ ರಾಜವಂಶವನ್ನು ಸ್ಥಾಪಿಸಿದನು. ಆತನು ಚಂದ್ರಗಿರಿ ರಾಜ್ಯದ ಗುಂಡನ ಮಗನಾಗಿದ್ದನು. ಸಾಳುವ ವಂಶವು ಸಂಗಮ ವಂಶದಷ್ಟೇನು ಪ್ರತಿಷ್ಟೆಯನ್ನು ಸಾಧಿಸಿರಲಿಲ್ಲ. ಆದರೆ ರಾಜ್ಯ ರಕ್ಷಣೆಯ ಕಾರ್ಯವನ್ನು ನಡೆಸಿದರು ಈ ಮನೆತನದ ಪ್ರಸಿದ್ಧನಾದ ರಾಜ ನರಸಿಂಹನು ಆಗಿದ್ದಾನೆ. ಆತನು ಪಟ್ಟವನ್ನೇರಿದಾಗ, ರಾಜಕೀಯ ಪರಿಸ್ಥಿತಿಯು ಅರಾಜಕತೆಯ ಗತಿಯನ್ನು ಮುಟ್ಟಿತ್ತು. ಈ ಸಮಯದಲ್ಲಿ ಒರಿಸ್ಸಾದ ಗಜಪತಿ ರಾಜನು ಬಹಮನಿಯರೊಂದಿಗೆ ಸೇರಿಕೊಂಡು ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡ್ಡಿದ್ದನು. ನರಸಿಂಹನ ತನ್ನ ರಾಜ್ಯದ ರಕ್ಷಣೆಗಾಗಿ ಮೊದಲು ಒರಿಸ್ಸಾದ ಗಜಪತಿ ರಾಜನತ್ತ ಗಮನವನ್ನು ಹರಿಸಿದನು ಮತ್ತು ಅವನನ್ನು ಸೋಲಿಸುವುದರೊಂದಿಗೆ ವಿಜಯನಗರ ಸಾಮ್ರಾಜ್ಯದ ರಕ್ಷಣೆಯನ್ನು ಮಾಡಿದನು. ಆತನು ಯಶಸ್ವಿಯಾಗಿ ಉದಯಗಿರಿಯನ್ನು ವಶಪಡಿಸಿಕೊಂಡನು ಹಾಗೂ ತನ್ನ ಸಾಮ್ರಾಜ್ಯವನ್ನು ಗೋದವರೆಗಿನ ಸಮಗ್ರ ಪ್ರದೇಶವನ್ನು ಆಕ್ರಮಿಸಿಕೊಂಡನು. ಹೀಗೆ ರಾಜ್ಯ ರಕ್ಷಣೆ ಮತ್ತು ಸಾಮ್ರಾಜ್ಯ ವಿಸ್ತರಿಸಿದ ವಿಜಯನಗರ ಅರಸರಲ್ಲಿ ಒಬ್ಬ ಪ್ರತಿಷ್ಠಿತ ರಾಜನಾಗಿದ್ದಾನೆ.

ಸಾಳುವ ನರಸಿಂಹನು ತನ್ನ ಸಾಮ್ರಾಜ್ಯದ ಅನೇಕ ಸೈನ್ಯಾಧಿಕಾರಿಗಳು, ಕುಲಿನರು ಮತ್ತು ಪಾಳೇಗಾರರು ಈತನ ಅಧಿಕಾರವನ್ನು ದಿಕ್ಕರಿಸಲು ಪ್ರಯತ್ನಿಸಿದರು. ಇದರಿಂದ ಈ ಸಾಳುವ

ರಾಜ ಮನೆತನವು ಕೆಲವೆ ವರ್ಷಗಳಲ್ಲಿ ಸಾಳುವ ವಂಶವು ಕೊನೆಗೊಂಡಿತು. ಕಾರಣ ಸಾಳುವ ನರಸಿಂಹನು ಕ್ರಿ.ಶ. ೧೪೯೧ ರಲ್ಲಿ ನಿಧನನಾದನು. ಈ ಸಂದರ್ಭದಲ್ಲಿ ಆತನ ಮಕ್ಕಳು ಅಪ್ರಾಪ್ತ ವಯಸ್ಕರಾಗಿದ್ದರೂ ಶ್ರೇಷ್ಠ ಸೈನ್ಯಾಧಿಕಾರಿಯಾದ ನರಸನಾಯಕನು ಆಡಳಿತವನ್ನು ನಡೆಸಿ, ಸಾಳುವ ವಂಶವನ್ನು ರಕ್ಷಿಸಿದನು. ಆದರೆ ೧೫೦೩ ರಲ್ಲಿ ರಾಜಪ್ರತಿನಿಧಿಯಾದ ನರಸನಾಯಕನ ಶ್ರೇಷ್ಠ ಪುತ್ರನಾದ ವೀರನರಸಿಂಹನು ತಾನೇ ವಿಜಯನಗರದ ಚಕ್ರವರ್ತಿಯಾಗಲು ಬಯಸಿದನು. ೧೫೦೫ ರಲ್ಲಿ ಆತನು ಇಮ್ಮಡಿ ನರಸಿಂಹನನ್ನು ಕೊಲೆಮಾಡಿ, ಸಿಂಹಾಸನವನ್ನೇರಿದನು. ಆದ್ದರಿಂದ ಆತನು ಸಾಳುವ ವಂಶದ ಆಳ್ವಿಕೆಯನ್ನು ಕೊನೆಗಾಣಿಸಿ ತುಳುವ ವಂಶವನ್ನು ಸ್ಥಾಪಿಸಿದನು.

ವಿಜಯನಗರ ಬಹಳ ದೊಡ್ಡ ಜನಸಂಖ್ಯೆಯ ನಗರ. ರಾಜ್ಯ ಸೆರೆನ್ ದೌನ್‌ದ (ಸಿಂಹಳ) ಗಡಿಯಿಂದ ಬಕಲ್ಬೆರ್ಗದ ಕೊಟ್ಟಕೊನೆಯವರೆಗೆ, ಬಂಗಾಲದಿಂದ ಮಲಬಾರ್ ಕೊನೆಯವರೆಗೆ ಸಾವಿರ ಫರೆಸಾಂಗ್‌ಗಳಷ್ಟು ವಿಸ್ತರಿಸಿದೆ. ಮುನ್ನೂರು ಬಂದರುಗಳಿವೆ, ಸೈನ್ಯದಲ್ಲಿ ೧೧ ಲಕ್ಷ ಯೋಧರಿದ್ದಾರೆ, ಸಾವಿರಕ್ಕೂ ಹೆಚ್ಚಿನ ಪೆಡಂಭೂತಗಳಿವೆ, ಆನೆಗಳಿವೆ. ಈ ರಾಯನಂತರ ಶ್ರೇಷ್ಠ ದೊರೆ ಹಿಂದುಸ್ತಾನದಲ್ಲಿ ಎಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ. ವಿಜಯನಗರದಂತಹ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ, ಈ ನಗರವನ್ನು ಏಳು ದುರ್ಗಗಳು ಏಳುಕೋಟೆಗಳೂ ಒಂದನ್ನೊಂದು ಆವರಿಸಿಕೊಂಡಿವೆ. ರತ್ನಪಡಿ ವ್ಯಾಪಾರಿಗಳು ಅಂಗಡಿಬೀದಿಗಳಲ್ಲಿ ಬಹಿರಂಗವಾಗಿ ವಜ್ರವೈಢೂರ್ಯಗಳನ್ನು, ಮುತ್ತುಗಳನ್ನು ಮಾರುತ್ತಾರೆ. ರಾಜನನ್ನು ಸ್ವತಃ ಕಂಡ ಅಬ್ದುಲ್ ರಜಾಕ್ ಆತನ ಕೃತಿಯಲ್ಲಿ ವರ್ಣನೆಯನ್ನು ಮಾಡಿದ್ದಾನೆ. ಹಾಗೂ ಅರಮನೆಯಲ್ಲಿ ಅರಸನ ಹತ್ಯೆಗಾಗಿ ನಡೆಯಿತೆನ್ನಲಾದ ಘಟನೆಯ ವಿವರಗಳನ್ನು ನೀಡಿದ್ದಾನೆ.[೨೫]

**ತುಳುವ ವಂಶ (೧೫೦೫–೧೫೫೫)**

**ಕೃಷ್ಣದೇವರಾಯ – (೧೫೦೯–೨೯)**

೧೫೦೯ ರಲ್ಲಿ ವೀರನರಸಿಂಹ ಮರಣ ಹೊಂದಿದ ನಂತರ ಆತನ ಸಹೋದರ ಕೃಷ್ಣದೇವರಾಯ ಪಟ್ಟಕೆ ಬಂದ. ವಿಜಯನಗರದ ಅರಸರಲ್ಲಿ ಅತಿ ಶ್ರೇಷ್ಠನೂ, ಭಾರತದ ಇತಿಹಾಸದಲ್ಲಿಯೇ ಪ್ರಖ್ಯಾತನೂ ಆದ ಈತ ಕೇವಲ ೨೦ ವರ್ಷಗಳ ಕಾಲ ಆಳಿದರೂ ಆ ಅಲ್ಪ ಕಾಲದಲ್ಲಿಯೇ ಸಾಮ್ರಾಜ್ಯದ ಕೀರ್ತಿ ದೇಶಾದ್ಯಂತ ಹರಡಲು ಕಾರಣನಾದ. ಈ ಅರಸನ ಕಾಲದಲ್ಲಿ ಅನೇಕರು ಪ್ರವಾಸಿಗಳಾಗಿ ವಿಜುಯನಗರಕ್ಕೂ ಬಂದಿದ್ದರು. ಅವರಲ್ಲಿ ಪೋರ್ಚುಗೀಸರಾದ ಬಾರ್ಬೊಸ ಮತ್ತು ಡೊಮಿಂಗೊ ಪೇಯಿಸ್ ಪ್ರಮುಖರು. ಇವರ ಬರಹಗಳು ವಿಜಯನಗರ ಸಾಮ್ರಾಜ್ಯದ ಇತಿಹಾಸಕ್ಕೆ ಉಪಯುಕ್ತವಾಗಿವೆ. ಅನಂತರ ಬಂದ ನ್ಯೂನಿಜನೂ ಪೋರ್ಚುಗಿಸನೇ.

ಕೃಷ್ಣದೇವರಾಯ ಓರಿಸ್ಸಾದ ವಿಜಯವನ್ನು ಸೂಚಿಸಲೆಂಬಂತೆ ಮಹಾನವಮಿ ದಿಬ್ಬವನ್ನು ಕಟ್ಟಿಸಿದ. ಅನಂತರ ನವರಾತ್ರಿಯ ಉತ್ಸವಗಳು ವಿಶೇಷ ಸಮಾರಂಭಗಳು ಇಲ್ಲಿಯೇ ನೆರವೇರುತ್ತಿದ್ದವು.

ಈತನು ಗಜಪತಿಯನ್ನು ಎದುರಿಸಬೇಕಾಗಿ ಬಂದು ಆತನನ್ನು ೧೫೦೯ ರಲ್ಲಿ ಸೋಲಿಸಿದನು. ಇದರ ಹಿಂದೆಯೇ ಬಹಮನಿ ಅರಸರು ವಿಜಾಪುರದ ಯೂಸೂಫ್ ಆದಿಲ್‌ಷಾನ ಜೊತೆ ದಂಡೆತ್ತಿ ಬರಲು ಈ ಸಂಯುಕ್ತ ಸೇನೆಯನ್ನು ರಾಯನು ಡೊಲಕಿಯಲ್ಲಿ ಸೋಲಿಸಿ, ಅವರನ್ನು ಕೋವಿದೊಂಡರು ತನಕ ಬೆನ್ನಟ್ಟಿ ಅಲ್ಲಿ ಅವರನ್ನು ಮತ್ತೆ ಸೋಲಿಸಿದನು. ೧೫೧೦ ರ ಜನವರಿಯಲ್ಲಿ ಆತನ ಕಿರೀಟಧಾರಣೋತ್ಸವವಾಗಿ ಅದರ ಹಿಂದೆಯೇ ಅವನಿಗೂ ಆದಿಲ್‌ಷಾನಿಗೂ ಮತ್ತೊಂದು ಯುದ್ಧವಾಗಿ ಯೂಸೂಫ್ ಆದಿಲ್‌ಷಾ ಈ ಯುದ್ಧದಲ್ಲಿ ಕೊಲ್ಲಲ್ಪಟ್ಟ. ದೀರ್ಘಕಾಲದಿಂದ ಬಂಡೆದ್ದಿದ್ದ ಉಮ್ಮತ್ತೂರಿನ ಅರಸನನ್ನು ಸೋಲಿಸಿ ಅವನು ಶಿವನಸಮುದ್ರ ಕೋಟೆಯನ್ನು ಗೆದ್ದುದು (೧೫೧೨) ಅವನ ಇನ್ನೊಂದು ಸಾಧನೆ. ಇಪ್ಪತ್ತು ವರ್ಷಗಳಿಂದ ವಿಜಾಪುರದವರ ಕೈಯಲ್ಲಿದ್ದ ರಾಯಚೂರನ್ನು ಅವನು ಅದೇ ವರ್ಷ ಗೆದ್ದ. ದೀಘಕಾಲದಿಂದ ಪ್ರತಿಭಟನೆಯೊಡ್ಡಿದ ಮಂಗಳೂರನ್ನು ಸಹ ಅದೇ ವರ್ಷ ವಶಪಡಿಸಿಕೊಂಡ.

ಇದರ ನಂತರ ೧೫೧೩ ರಲ್ಲಿ ಅವನು ಉದಯಗಿರಿ ಕೋಟೆಯನ್ನು ಜಗಪತಿಯಿಂದ ದೀರ್ಘಮುತ್ತಿಗೆಯ ನಂತರ ವಶಪಡಿಸಿಕೊಂಡ. ಕಂದಕೂರು, ಆದ್ದಂಕಿ, ವಿನುಕೊಂಡ, ಬೆಲ್ಲಮಕೊಂಡ, ನಾಗಾರ್ಜುನಕೊಂಡ ಹಾಗೂ ಕೇತವರಂಗಳನ್ನು ಗೆದ್ದ. ೧೫೧೮ ರಲ್ಲಿ ಗಜಪತಿ ಪ್ರತಾಪರುದ್ರ ಇವನ ಜೊತೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಗಜಪತಿಯ ಮಗಳು ತುಕ್ಕಾದೇವಿ ಅಥವಾ ಜಗನ್ಮೋಹಿನಿಯನ್ನು ರಾಯ ವರಿಸಿದನು.

ವಿಜಯನಗರದ ಸೇನೆ ಕಳಿಂಗದಲ್ಲಿದ್ದಾಗ ಕುತುಬ್ ಷಾ ಕೊಂಡವೀಡನ್ನು ಮುತ್ತಿದ. ರಾಜಧಾನಿಗೆ ಮರಳುತ್ತಿದ್ದ ಕೃಷ್ಣದೇವರಾಯನು ಈ ಗೋಲ್ಕೊಂಡ ಸೇನೆಯ ದಂಡ ನಾಯಕನನ್ನೇ ಸೆರೆಹಿಡಿದ. ವಿಜಾಪುರದವರು ರಾಯಚೂರನ್ನು ಗೆಲ್ಲಲು ಯತ್ನಿಸಿದಾಗ ರಾಯನು ಇವರನ್ನು ಬೆನ್ನಟ್ಟಿ ಕೆಂಭಾವಿ, ಸುರಪುರಗಳಲ್ಲಿ ಅವರನ್ನು ಸೋಲಿಸಿದ. ೧೫೨೨ ರಲ್ಲಿ ರಾಯಚೂರು ಕೋಟೆ ವಿಜಾಪುರವನ್ನೇ ಆಕ್ರಮಿಸಿ ಆ ರಾಜಧಾನಿಯಲ್ಲಿ ಕೆಲದಿನ ನೆಲೆನಿಂತ (ಮಾರ್ಚ್, ೧೫೨೨) ಅಲ್ಲಿಂದ ಗುಲ್ಬರ್ಗಕ್ಕೆ ಸಾಗಿ ಅಲ್ಲಿನ ಕೋಟೆಯನ್ನು ನಾಶಮಾಡಿದ. ಅನಂತರ ಕಲ್ಬುರ್ಗಿ, ಬೀದರ್ ಕೋಟೆಗಳನ್ನೂ ಗೆದ್ದು, ಕಾಸಿಂ ಬಲೀದ್‌ನನ್ನು ಸುಲ್ತಾನನ್ನು ಬಿಡುಗಡೆ ಮಾಡಿ, ಅವನಿಗೆ ಪಟ್ಟಕಟ್ಟಿ, “ಯವನ ರಾಜ್ಯಸ್ಥಾಪನಾಚಾರ್ಯ” ಎಂಬ ಬಿರುದನ್ನು ತಳೆದ. ಅಲ್ಲಿಂದ ರಾಜಧಾನಿಗೆ ಮರಳಿ ೧೫೨೯ ರವರೆಗೆ ಶಾಂತಿಯಿಂದ ಆಳಿದ. ರಾಮಸ್ವಾಮಿ ದೇವಾಲಯದ ವಿಸ್ತರಣೆ, ವಿರೂಪಾಕ್ಷ ದೇವಾಲಯಕ್ಕೆ ಕಲ್ಯಾಣಮಂಟಪ, ಒಂದು ಗೋಪುರಗಳ ರಚನೆ, ಹೊಸದಾಗಿ ಕೃಷ್ಣಸ್ವಾಮಿ, ವಿಠಲಸ್ವಾಮಿ ದೇವಾಲಯಗಳ ರಚನೆ ರಾಜಧಾನಿಯಲ್ಲಿ ರಾಯನು ಮಾಡಿಸಿದ. ಗಣ್ಯ ನಿರ್ಮಾಣಗಳು, ಘನಗಾತ್ರದ ಲಕ್ಷ್ಮೀ ನರಸಿಂಹನ ಪ್ರತಿಷ್ಠಾಪಕನು ಈತನೇ (೧೫೨೯).

ಗೋವೆಯನ್ನು ವಿಜಾಪುರದಿಂದ ಗೆಲ್ಲಲು (೧೫೧೦) ಪೋರ್ಚುಗೀಸರಿಗೆ ನೆರವಾದ ಈತನು ಈ ಬಿಳಿಯರ ಜೊತೆ ಸ್ನೇಹದಿಂದ ಇದ್ದ. ಪೋರ್ಚುಗೀಸ್ ಪ್ರವಾಸಿಗಳಾದ ಪಾಯಿಶ್, ಬರ್ಬೋಸರು ಇವನ ಆಸ್ಥಾನಕ್ಕೆ ಭೇಟಿ ನೀಡಿದ್ದು, ಪಾಯಿಶ್ ಈತನನ್ನು "ಒಬ್ಬ ಘನವಂತ ಅರಸು, ಭಾರೀ ನ್ಯಾಯಶೀಲ ಮನುಷ್ಯ" ಎಂದಿದ್ದಾನೆ. ಸ್ವತಃ ವಿದ್ವಾಂಸನಾದ ರಾಯ "ಅಮುಕ್ತಮೌಲ್ಯ" ದ (ತೆಲುಗು) ಹಾಗೂ "ಜಾಂಬವತೀ ಕಲ್ಯಾಣ" (ಸಂಸ್ಕೃತ ನಾಕಟ) ಗಳನ್ನು ಬರೆದಿದ್ದು, ತೆಲುಗು ಸಾಹಿತ್ಯದ ಅಷ್ಟದಿಗ್ಗಜರಾದ ಪೆದ್ದನ, ನಂದಿತಿಮ್ಮನ, ತೆನಾಲಿ ರಾಮಕೃಷ್ಣ ಮುಂತಾದವರಿಗೆ ಆಶ್ರಯ ನೀಡಿದ್ದ. ಕನ್ನಡ ಕವಿ ತಿಮ್ಮಣ್ಣ ಇವನ ಆಸ್ಥಾನಿಕ.[೩೬]

ಕೃಷ್ಣದೇವರಾಯನ ನಂತರ ಅವನ ಸೋದರ ಅಚ್ಯುತರಾಯನಿಗೆ ಪಟ್ಟವಾಯಿತು. (೧೫೨೯) ಆಗ ಸಾಮ್ರಾಜ್ಯವು ಅನೇಕ ದಾಳಿಗಳನ್ನು ಆಂತರಿಕ ಬಂಡಾಯಗಳನ್ನು ಎದುರಿಸಬೇಕಾಯಿತು. ಈ ಕಾಲದಲ್ಲಿ ವಿಜಾಪುರದ ಆದಿಲ್‌ಷಾ ರಾಯಚೂರನ್ನು ಗೆದ್ದುಕೊಂಡಲಾದರೂ ೧೫೩೫ ರಲ್ಲಿ ಅದನ್ನು ಮತ್ತೆ ವಶಪಡಿಸಿಕೊಳ್ಳಲಾಯಿತು. ತಿರುವಾಂಕೂರಲ್ಲಿ ಎದ್ದ ಬಂಡಾಯವನ್ನು ಆತ ಹತ್ತಿಕ್ಕಿದ. ಈತನ ಕಾಲದಲ್ಲಿ ಬಂದ ನ್ಯೂನಿಜ್‌ನು ಅಚ್ಯುತನನ್ನು "ಸುಳ್ಳುಗಾರ, ಪುಕ್ಕಲು ಮನುಷ್ಯ" ಎಂದಿರುವನು. ಆದರೆ ಇದು ಪೂರ್ವಗ್ರಹಪೀಡಿತನಾದ ಮಾತು. "ಅಚ್ಯುತಾಭ್ಯುದಯಂ" ಹಾಗೂ "ವರದಾಂಬಿಕಾ ಪರಿಣಂ" ಗಳಲ್ಲಿ ಅವರ ಸಾಧನೆಗಳ ಚಿತ್ರಣ ದೊರೆಯುತ್ತದೆ. ತೀರ ಸಂಕಟ ಪರಿಸ್ಥಿತಿಗಳಲ್ಲಿ ಆಳಿದ ಆತನು ಸಾಮ್ರಾಜ್ಯವನ್ನು ರಕ್ಷಿಸಲು ಶಕ್ತಿಮೀರಿ ಶ್ರಮಿಸಿದನೆಂಬುದು ಖಚಿತ.

ಅಚ್ಯುತನ ನಿಧನಾನಂತರ (೧೫೪೨) ಆತನ ಎಳೆಯ ಮಗ ವೆಂಕಟನಿಗೆ ಪಟ್ಟವಾಯಿತು. ಆದರೆ ಅಚ್ಯುತನ ಭಾವಮೈದುನ ಸಲಕರಾಜು ತಿಮ್ಮರಾಜು ರಾಜ್ಯಾಪಹಾರಕ್ಕೆ ಯತ್ನಿಸಿದ, ಅವನು ವೆಂಕಟನನ್ನೂ ಕೊಂದ. ಕೃಷ್ಣದೇವರಾಯನ ಅಳಿಯನಾದ ಅರವೀಡು ರಾಮರಾಯನು ಅಚ್ಯುತನ ಸೋದರ ರಂಗನ ಮಗ ಸದಾಶಿವರಾಯನ ಹಕ್ಕನ್ನು ಮುಂದೊಡ್ಡಿ, ೧೫೪೩ ರಲ್ಲಿ ಸದಾಶಿವನಿಗೆ ಪಟ್ಟ ಕಟ್ಟಿಸಿದ. ಆದರೆ ಸದಾಶಿವನು ಹೆಸರಿಗೆ ಮಾತ್ರ ಅರಸನಾಗಿದ್ದು ಆಡಳಿತವೆಲ್ಲ ರಾಮರಾಯನ ಕೈಯಲ್ಲಿತ್ತು.[೩೭]

### ಅರವೀಡು ವಂಶ (೧೫೫೫–೧೬೪೬)

ಈ ಮನೆತನದವರು ತಾವು ಚಂದ್ರವಂಶೀಯರೆಂದು ಹೇಳಿಕೊಂಡಿರುವರು. ಪನ್ನಮನು ಈ ವಂಶದ ಮೂಲ ಪುರುಷ. ಈತನ ಮಗ ಸೋಮದೇವನು ಶೂರನಾಗಿದ್ದು, ಇಮ್ಮಡಿ ಹರಿಹರನ ಸಮಕಾಲೀನನಾಗಿದ್ದನು. ಈತನ ಮಗನಾದ ಅರವೀಟಿ ಬುಕ್ಕನು ಹಿರಿಯ ಸಾಳುವ ನರಸಿಂಹನ ಬಲಿಷ್ಠ ಸೇನಾಪತಿಯಾಗಿದ್ದವನು. ಈತನ ಮಗನು ರಾಮರಾಜನು ಈ ರಾಮರಾಜ ಮಗ ಶ್ರೀರಂಗ, ಶ್ರೀರಂಗನ ಮಕ್ಕಳಲ್ಲಿ ಅಳಿಯ ರಾಮರಾಯ, ತಿರುಮಲ, ವೆಂಕಟಾದ್ರಿ ಈ ಮೂವರು ಪ್ರಖ್ಯಾತರಾಗಿದ್ದವರು.

## ರಾಮರಾಯ

ತುಳುವ ಅರಸರ ಕೈಕೆಳಗೆ ಸೇನಾನಿಯಾಗಿದ್ದ ಅರವೀಡು ರಂಗನ ಮಗನಾದ ರಾಮರಾಯನು ಕೃಷ್ಣದೇವರಾಯನ ಕಾಲದಲ್ಲಿ ಗಣ್ಯ ಸೇನಾನಿಯಾದಲ್ಲದೆ ಅವನೂ ಅವನ ಸೋದರ ತಿರುಮಲನೂ ಕೃಷ್ಣದೇವರಾಯನ ಕನ್ಯೆಯರಾದ ತಿರುಮಲಾಂಬೆ ಮತ್ತು ವೆಂಗಳಾಂಬೆಯರನ್ನು ಅನುಕ್ರಮವಾಗಿ ವರಸಿ "ಅಳಿಯ" ಎಂಬ ಉಪನಾಮದಿಂದ ಖ್ಯಾತರಾಗಿದ್ದರು. ಇವನಿಗೆ ವೆಂಕಟಾದ್ರಿ ಎಂಬ ಇನ್ನೊಬ್ಬ ಸೋದರನೂ ಇದ್ದ. ಕೃಷ್ಣದೇವರಾಯನ ಮರಣಾನಂತರ ರಾಮರಾಯನು ಪಟ್ಟವೇರಲು ಯತ್ನಿಸಿ ವಿಫಲನಾಗಿ, ಮುಂದೆ ಅಚ್ಯುತನ ಪಟ್ಟಕ್ಕೆ ಬೆಂಬಲ ನೀಡಿದ್ದ. ಅಚ್ಯುತನ ಮರಣಾನಂತರ ಸದಾಶಿವನ ಪಕ್ಷವನ್ನು ಬೆಂಬಲಿಸಿ ಅವನು ಪಟ್ಟವೇರಲು ಸಹಾಯ ಮಾಡಿದ. ಸದಾಶಿವರಾಯನು ಇನ್ನೂ ಬಾಲಕನಾಗಿದ್ದುದರಿಂದ ತಾನೇ ರಾಜರಕ್ಷಕನಾಗಿ ಆಡಳಿತ ನಿರ್ವಹಿಸುತ್ತಿದ್ದು, ಮುಂದೆ ಸದಾಶಿವನು ಪ್ರಾಪ್ತ ವಯಸ್ಕನಾದಾಗ ರಾಮರಾಯನು ಆತನನ್ನು ಬಂದಿಯಂತೆ ಇಟ್ಟು ರಾಜ್ಯದ ಜವಾಬ್ದಾರಿಗಳನ್ನು ತಾನೇ ನಿರ್ವಹಿಸಿದ.

ರಾಮರಾಯನು ಸಮರ್ಥ ಸೇನಾನಿ ಒಳ್ಳೆಯ ಆಡಳಿತಗಾರ ಹಾಗೂ ಕುಶಲರಾಜ ನೀತಿಜ್ಞ. ಅವನ ಶಕ್ತಿ ಸಾಮರ್ಥ್ಯಗಳು ಅಸಾಧಾರಣವಾಗಿದ್ದರೂ ಅವುಗಳ ಬಗ್ಗೆ ಆತನಿಗೆ ಅತಿವಿಶ್ವಾಸ ಸಾಮ್ರಾಜ್ಯಕ್ಕೆ ವಿಧೇಯರಾಗಿದ್ದರೂ, ವೈಯಕ್ತಿಕವಾಗಿ ತನಗೆ ವಿರೋಧವಾಗಿದ್ದ ಅನೇಕ ನಿಷ್ಠ ಸೇನಾನಿಗಳನ್ನು ಅವನು ಸ್ಥಾನಚ್ಯುತನಾಗಿ ಮಾಡಿದ. ಇದರಿಂದ ಸಾಮ್ರಾಜ್ಯವು ದುರ್ಬಲವಾಯಿತು. ನೆರೆಯ ಶತ್ರುರಾಜ್ಯದಿಂದ ಬಂದ ಗಿಲಾನಿ ಸೋದರರೆಂಬ ಇಬ್ಬರು ಸೇನಾನಿಗಳಲ್ಲಿ ವಿಶೇಷ ವಿಶ್ವಾಸವಿಟ್ಟು ಅವರನ್ನು ಉನ್ನತ ಸೇನಾಧಿಕಾರಿಗಳಾಗಿ ಮಾಡಿದ. ಉತ್ತರದ ಷಾಹಿ ದೊರೆಗಳು ತಮ್ಮ ಒಳಜಗಳಗಳಲ್ಲಿ ಪಾಲುಗೊಳ್ಳಲು ರಾಮರಾಯನನ್ನು ಆಮತ್ರಿಸುತ್ತಲೇ ಇದ್ದರು. ಈ ಪರಿಸ್ಥಿತಿಯಲ್ಲಿ ಪೂರ್ಣಲಾಭ ಪಡೆದು ರಾಮರಾಯನು ಸಾಮ್ರಾಜ್ಯವನ್ನು ಕೃಷ್ಣೆಯ ಉತ್ತರಕ್ಕೂ ವಿಸ್ತರಿಸಿದ. ಈತನ ನೆರವಿನಿಂದಲೇ ಇಬ್ರಾಹಿಂ ಗೋಲ್ಕೊಂಡದ ಪಟ್ಟವೇರಿದ್ದ. ಅಲಿ–೨ ಆದಿಲ್‌ಷಾನ ಬಗ್ಗೆ ರಾಮರಾಯನು ಎಷ್ಟೊಂದು ಪ್ರೀತಿಯನ್ನು ತೋರಿದನೆಂದರೆ ಆತನನ್ನು ಇವನು ತನ್ನ ದತ್ತು ಪುತ್ರನೆಂದು ಭಾವಿಸಿದ್ದ.

ತಿರುವಾಂಕೂರು, ಚಂದ್ರಗಿರಿ ಪ್ರದೇಶಗಳಲ್ಲಿ ಕಾಣಿಸಿದ ಬಂಡಾಯಗಳನ್ನು ಹತ್ತಿಕ್ಕಿದ ರಾಮರಾಯನು ಸಿಂಹಳದ ಕ್ಯಾಂಡಿಯ ಅರಸನಿಂದಲೂರ ಕಪ್ಪ ಸಂಗ್ರಹಿಸಿದ. ಪೋರ್ಚುಗೀಸರ ಜೊತೆ ಅವಶ್ಯಕವಿದ್ದಾಗಲೆಲ್ಲ ಆತ ಕಠಿಣವಾಗಿ ನಡೆದುಕೊಂಡನಲ್ಲದೆ ಅವರ ಕೇಂದ್ರಸ್ಥಾನ ಒಮ್ಮೆ ಆಕ್ರಮಿಸಿದ್ದ.

ಷಾಹಿ ಸುಲ್ತಾನರುಗಳ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡಿದನೆಂದು ಅವನನ್ನು ಟೀಕಿಸಲಾಗುತ್ತದೆ. ಇದು ನಿರಾಧಾರ ಟೀಕೆ. ಅವರು ಆಮಂತ್ರಿಸಿದಾಗಲೇ ಆತ ಅವರ ವ್ಯವಹಾರದಲ್ಲಿ ಕೈಹಾಕುತ್ತಿದ್ದ.

ಒಮ್ಮೆ ಅಹ್ಮದ್‌ನಗರದ ನಿಜಾಂಶಾ ಹಾಗೂ ಗೋಲ್ಕಂಡದ ಕುತುಬ್‌ಷಾರು ವಿಜಾಪುರದ ವಿರುದ್ಧ ಅವನ ನೆರವು ಕೇಳಲು ಆತ ಅವನ ನೆರವಿಗೆ ಹೋಗಿ ರಾಯಚೂರು ದೋ-ಆಬ್‌ನ್ನು ಪಡೆದುಕೊಂಡ. ೧೫೪೯ ರಲ್ಲಿ ಬೀದರ್‌ನ ಬರೀದ್‌ಷಾನ ನೆರವಿನಿಂದ ಆದಿಲ್‌ಷಾ ಅಹ್ಮದ್‌ನಗರದ ಮೇಲೆ ದಾಳಿ ಮಾಡಲು ಅಹ್ಮದ್‌ನಗರದವರು ರಾಮರಾಯನ ನೆರವು ಪಡೆದು ಕಲ್ಯಾಣಕೋಟೆಯನ್ನು ವಿಜಾಪುರದಿಂದ ಸೆಳೆದುಕೊಂಡರು. ಈ ರೀತಿಯಾದ ಒಳಸಂಚಿನಿಂದ ಮುಂದೆ ವಿಜಯನಗರ ಸಾಮ್ರಾಜ್ಯ ಅಳಿವಿಗೆ ರಾಮರಾಯನ ನೀತಿಯು ಸಹ ಪ್ರಮುಖ ಕಾರಣವಾಗಿದೆ.[೩೮]

**ಸದಾಶಿವರಾಯ – (೧೫೪೨-೧೫೭೦)**

ಅಚ್ಯುತರಾಯನ ನಂತರ ಆತನ ಮಗನಾದ ವೆಂಕಟಾದ್ರಿಗೆ ಪಟ್ಟವಾಯಿತು. ಆದರೆ ಬಾಲಕನಾದ ವೆಂಕಟಾದ್ರಿಯ ಅಲ್ಪಕಾಲದಲ್ಲಿಯೇ ತೀರಿಹೋಗಿದ್ದರಿಂದ ಸದಾಶಿವರಾಯನು ಪಟ್ಟಕ್ಕೆ ಬಂದನು. ಆದರೆ ಈತನು ನಾಮಮಾತ್ರ ರಾಜನಾಗಿದ್ದು, ರಾಜ್ಯದ ಎಲ್ಲ ಅಧಿಕಾರ ರಾಮರಾಯನ ಕೈಯಲ್ಲಿತ್ತು. ಕ್ರಿ.ಶ. ೧೫೪೨ ರಿಂದ ೧೫೫೦ ರ ವರಗೆ ಶಾಂತಿಯುತವಾಗಿ ಈತನ ಆಳ್ವಿಕ ನಡೆಯಿತು. ರಾಮರಾಯನು ಸದಾಶಿವರಾಯನ ಪ್ರತಿನಿಧಿಯಾಗಿ ಹಲವು ದಾನಗಳನ್ನು ನೀಡಿದನು. ಆದರೆ ಅನಂತರದ ಅವಧಿಯಲ್ಲಿ ಸದಾಶಿವರಾಯನು ಪ್ರಬುದ್ಧನಾಗಿ ರಾಜ್ಯಾಡಳಿತದಲ್ಲಿ ಹೆಚ್ಚು ಆಸಕ್ತಿ ತೋರಲು ರಾಮರಾಯನು ಆತನನ್ನು ಬಂಧನದಲ್ಲಿರಿಸಿ ಅಧಿಕಾರದ ಚುಕ್ಕಾಣಿಯನ್ನು ತಾನೇ ಹಿಡಿದನು. ಅಲ್ಲದೆ ಸದಾಶಿವರಾಯನ ಸಮಾನವಾಗಿ ಆಡಳಿತವನ್ನು ನಿರ್ವಹಿಸತೊಡಗಿದನು. ತನ್ನ ಹಾಗೂ ಸದಾಶಿವರಾಯ ಇಬ್ಬ ಶಾಸನಗಳನ್ನು ಹೊರಡಿಸತೊಡಗಿದನು. ಹಾಗೂ ಅದರಲ್ಲಿ ತಮ್ಮಿಬ್ಬರ ವಂಶಾವಳಿಯನ್ನೂ ಹೇಳತೊಡಗಿದನು. ಮತ್ತು ಸಾಂದರ್ಭಿಕವಾಗಿ ಕೆಲವು ದಾನಗಳನ್ನು ತನ್ನೊಬ್ಬನ ಹೆಸರಿನಲ್ಲಿಯೇ ನೀಡಿರುವನು. ಕ್ರಿ.ಶ. ೧೫೬೩ ರ ಸುಮಾರಿನಲ್ಲಿ ರಾಮರಾಯನು ಸದಾಶಿವರಾಯನ ಅಧಿಕಾರವನ್ನು ಪೂರ್ಣವಾಗಿ ಮೊಟಕುಗೊಳಿಸಿ. ಅರಸನ ಸಕಲ ವೈಭವವನ್ನು, ಬಿರುದುಗಳನ್ನು ಧರಿಸಿ ತನ್ನೊಬ್ಬನ ಹೆಸರಿನಿಂದಲೇ ರಾಜ್ಯಕಾರ್ಯಗಳನ್ನು ನಡೆಸಲಾರಂಭಿಸಿದನು. ಈತನಿಗೆ ರಾಜಕಾರ್ಯದಲ್ಲಿ ಸಹೋದರರಾದ ತಿರುಮಲ ಹಾಗೂ ವೆಂಕಟಾದ್ರಿಯು ನೆರವಾದರು. ಈ ಮಧ್ಯದಲ್ಲಿ ಉತ್ತರದಲ್ಲಿ ಮಹಮ್ಮದೀಯ ರಾಜ್ಯಗಳಲ್ಲಿ ಅಂತಃ ಕಲಹಗಳು ಉಂಟಾಗಿ ಅದರಲ್ಲಿ ರಾಮರಾಯ ತಲೆಹಾಕಿ ಅವರನ್ನು ತನ್ನ ಕೈಗೊಂಬೆಗಳಂತೆ ಆಡಿಸಿದನು.

ಈ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯದ ಮೇರೆಯು ಹಿಂದೆ ಎಂದೂ ಪಡೆಯದಷ್ಟು ಉತ್ತರದಲ್ಲಿ ವಿಸ್ತಾರ ಪಡೆಯಿತು. ಅದು ಕೃಷ್ಣೆಯನ್ನು ದಾಟಿ ಭೀಮಾ ನದಿಯವರೆಗೆ ಕಲಬುರ್ಗಿ ಕಲ್ಯಾಣ ಪ್ರಾಂತದಲ್ಲಿಯೂ ಹಬ್ಬಿತು. ಈ ಒಂದು ವಿಚಾರದಲ್ಲಿ ರಾಮರಾಯನ ಈ ವಿಜಯವೈಭವವು

ಕೃಷ್ಣದೇವರಾಯನ ವೈಭವಕ್ಕಿಂತ ಮಿಗಿಲಾಗಿದೆ ಎನ್ನಬಹುದು. ಈ ರೀತಿಯಾಗಿ ವಿಜಯನಗರ ಸಾಮ್ರಾಜ್ಯದ ಅನಭಿಷಕ್ತ ಅಧಿಪತಿಯಾದ ರಾಮರಾಯನು ದಕ್ಷಿಣ ಭಾರತದ ರಾಜಕೀಯ ಕ್ಷೇತ್ರದಲ್ಲಿ ಪ್ರಧಾನ ಪುರುಷನಾಗಿ ಮೆರೆದನು. ಈ ಕಾಲದಲ್ಲಿ ವಿಜಯನಗರದ ವ್ಯಾಪಾರವೂ ವೃದ್ಧಿಯಾಯಿತು. ಆದರೆ ಕ್ರಿ.ಶ. ೧೫೬೪ ರ ಹೊತ್ತಿಗೆ ಮಹಮದೀಯರಲ್ಲಿ ವೈಮನಸ್ಸು ದೂರವಾಗಿ ಎಲ್ಲರೂ ಒಂದುಗೂಡಿ ವಿಜಯನಗರದ ವಿರುದ್ಧ ಯುದ್ಧ ಹೂಡಿದರು. ಕ್ರಿ.ಶ. ೧೫೬೫ ರ ಜನವರಿ ೨೩ ರಂದು ಎರಡೂ ಬಣಗಳು ರಕ್ಕಸಗಿ–ತಂಗಡಗಿ ಎಂಬ ರಣಭೂಮಿಯಲ್ಲಿ ಎದುರಾದವು. ಈ ಯುದ್ಧದಲ್ಲಿ ವಿಜಯನಗರಕ್ಕೆ ಸೋಲುಂಟಾಗಿ ರಾಮರಾಯನನ್ನು ಬಂಧಿಸಿ ಶಿರಚ್ಛೇದನ ಮಾಡಲಾಯಿತು. ಇದರಿಂದ ಪುನಃ ಚೇತರಿಸಿಕೊಳ್ಳಲಾಗದ ಸ್ಥಿತಿಗೆ ಬಂದು ತಲುಪಿತು. ಇಡೀ ಸಾಮ್ರಾಜ್ಯವು ಶತ್ರುಗಳ ಕೈಗೆ ಸಿಕ್ಕು ಲೂಟಿಗೊಳ್ಳಲ್ಪಟ್ಟಿತು. ಈ ನಿರ್ಣಾಯಕ ಯುದ್ಧವು ವಿಜಯನಗರವನ್ನು ಸಂಪೂರ್ಣ ನಾಶಪಡಿಸಿತು. ತಿರುಮಲ ಹಾಗೂ ವೆಂಕಟಾದ್ರಿಯರು ಸಾಧ್ಯವಾದಷ್ಟು ಮಟ್ಟಿಗೆ ವಿಜಯನಗರದ ಸಂಪತ್ತನ್ನು ಉಳಿಸಲೇಸುಗ ಅರಮನೆಯ ಸ್ತ್ರೀ ಬಂಧುವರ್ಗ ಹಾಗೂ ನಾಮಮಾತ್ರ ಅರಸನಾದ ಸದಾಶಿವರಾಯ ಮತ್ತು ವಿಜಯನಗರದ ರತ್ನ ಸಿಂಹಾಸನ, ವಿಫುಲವಾದ ಸಂಪತ್ತಿನೊಂದಿಗೆ ಪೆನುಗೊಂಡೆಗೆ ಪಲಾಯನ ಮಾಡಿದರು. ಮಹಮ್ಮದೀಯರು ಸತತ ಆರು ತಿಂಗಳ ಲೂಟಿಯ ನಂತರ ಬಿಟ್ಟುಹೋದ ವಿಜಯನಗರಕ್ಕೆ ತಿರುಮಲನು ಮತ್ತೆ ಬಂದು ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅದರ ವೈಭವವನ್ನು ಮತ್ತೆ ಬೆಳಗಿಸಬೇಕೆಂದು ಪ್ರಯತ್ನಿಸಿದನು. ಆದರೆ ಮತ್ತೆ ಮಹಮ್ಮದೀಯರು ಬಲವಿಲ್ಲದ ವಿಜಯನಗರಕ್ಕೆ ಭಯವನ್ನು ಒಡ್ಡಿದರು ಆದ್ದರಿಂದ ತಿರುಮಲನು ವಿಜಯನಗರದ ಅಭಿಲಾಷೆಯನ್ನು ಪೂರ್ತಿಯಾಗಿ ಬಿಟ್ಟು ಭದ್ರವಾದ ಕೋಟೆಯ ಸ್ಥಳವಾಗಿರುವ ಪೆನುಗೊಂಡೆಗೆ ರಾಜಧಾನಿಯನ್ನು ಸ್ಥಳಾಂತರಿಸಿದನು. ರಕ್ಕಸಗಿ–ತಂಗಡಗಿ ಯುದ್ಧವಾದ ಬಳಿಕ ಸುಮಾರು ಐದು ವರ್ಷಗಳವೆಗೆ ಸದಾಶಿವನು ಬಾಳಿದನು. ಈ ಅವಧಿಯಲ್ಲಿ ಆತನ ಪೂರ್ವಸ್ಥಿತಿಯಲ್ಲಿ ಯಾವುದೇ ವ್ಯತ್ಯಾಸವಾಗಲಿಲ್ಲ. ಹಿಂದಿನಂತೆಯೇ ಈತನು ಪ್ರತಿಬಂಧದಲ್ಲಿಯೇ ಕಾಲಕಳೆದನು. ಈಗ ಆತನ ಕಾರಾಗೃಹ ಅಧ್ಯಕ್ಷನ ಸ್ಥಳದಲ್ಲಿ ರಾಮರಾಯನ ಬದಲು ತಿರುಮಲನು ಬಂದಿದ್ದನು. ಹೀಗೆ ರಾಜನೆನಿಸಿಯೂ ರಾಜ್ಯವಾಳದ ಸದಾಶಿವರಾಯನು ಕ್ರಿ.ಶ. ೧೫೬೮ ರಲ್ಲಿ ಕೊಲೆಯಾದನು. ಈತನ ಮರಣದೊಂದಿಗೆ ವಿಜಯನಗರದ ಮೂರನೆಯ ಅರಸು ಮನೆತನದ ತುಳುವಂಶವು ಕಣ್ಮರೆಯಾಯಿತು. ಹೀಗೆ ರಕ್ಕಸಗಿ–ತಂಗಡಗಿಯ ತರುವಾಯ ವಿಜಯನಗರ ಸಾಮ್ರಾಜ್ಯ ಕೆಲಕಾಲ ಬಾಳಿತು. ಆದರೆ ಅದಕ್ಕೆ ಮೊದಲಿನ ಸಾಮರ್ಥ್ಯವು, ವೈಭವವೂ ಪ್ರಾಪ್ತವಾಗಲಿಲ್ಲ.

ಸದಾಶಿವರಾಯನ ಶಾಸನಗಳನ್ನು ಗಮನಿಸುವುದಾದರೆ ಈತನಿಗೆ ಸಂಬಂಧಿಸಿದಂತೆ ಹಂಪಿಯಲ್ಲಿ ದೊರೆತ ಶಾಸನಗಳು ೨೪ ಇದರಲ್ಲಿ ಯಾವ ಶಾಸನಗಳೂ ಸದಾಶಿವರಾಯನು ಸ್ವತಃ ಹೊರಡಿಸಿದ ಶಾಸನಗಳಿಲ್ಲ. ಎಲ್ಲ ಶಾಸನಗಳು ಆತನ ಮಾಂಡಲಿಕರು, ಮಂಡಲೇಶ್ವರರು

ಮುಂತಾದವರು ದಾನ ನೀಡಿದ ಹಾಗೂ ದೇವಾಲಯ ನಿರ್ಮಿಸಿದ ಉಲ್ಲೇಖನಗಳನ್ನು ಒಳಗೊಂಡಿದೆ. ಇದರಲ್ಲಿನ ಕೆಲವು ಪ್ರಮುಖವೆನಿಸಿದ ಶಾಸನಗಳನ್ನು ಮಾತ್ರ ಕೆಳಗೆ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೫೪೨ ರ ಶಾಸನವು ಸದಾಶಿವರಾಯನನ್ನು ಹಾಗೂ ಆತನ ಆಳ್ವಿಕೆಯನ್ನು ಉಲ್ಲೇಖಿಸುವ ಮೊದಲ ಶಾಸನವಾಗಿದೆ. ಇನ್ನೊಂದು ಕ್ರಿ.ಶ. ೧೫೪೫ ರ ಶಾಸನವು ಸದಾಶಿವರಾಯನು ವಿದ್ಯಾನಗರದಲ್ಲಿ ರತ್ನಸಿಂಹಾಸನಾರೂಢನಾಗಿ ಆಳುತ್ತಿರುವಾಗ, ಜಂಗಮಯ್ಯನು ಸದಾಶಿವರಾಯನಿಗೂ, ರಾಮರಾಯನಿಗೂ ಮತ್ತು ಪ್ರಧಾನಿ ತಿಮ್ಮರಾಜನಿಗೂ ಪುಣ್ಯವಾಗಲೆಂದು ಕೃಷ್ಣಪುರ ಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿಯಲ್ಲಿ ಮುದುವೀರಣ್ಣ ದಾನವನ್ನು ನೀಡಿದ ವಿವರವನ್ನು ಒಳಗೊಂಡಿದೆ.

**ತಿರುಮಲ – (೧೫೭೦–೭೮)**

ರಾಮರಾಯನು ವಿಜಯನಗರ ಸಾಮ್ರಾಜ್ಯದ ಸರ್ವಾಧಿಕಾರಿಯಾಗಿ ರಾಜ್ಯವಾಳುತ್ತಿರುವಾಗ ತಿರುಮಲನು ಆತನ ಪ್ರಧಾನ ಮಂತ್ರಿಯಾಗಿದ್ದನು. ರಕ್ಕಸಗಿ–ತಂಗಡಗಿ ಯುದ್ಧದಲ್ಲಿ ರಾಮರಾಯನ ವಧೆಯಾದ ಬಳಿಕ ಸಾಮ್ರಾಜ್ಯದ ಎಲ್ಲ ಆಡಳಿತವನ್ನು ತಿರುಮಲನು ಪ್ರತ್ಯಕ್ಷವಾಗಿ ತನ್ನ ಕೈಯಲ್ಲಿ ತೆಗೆದುಕೊಂಡು ಸದಾಶಿವರಾಯನ ಮರಣದ ನಂತರ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ವಿಜಯನಗರ ಸಾಮ್ರಾಜ್ಯದ ಅಧಿಪತಿಯಾದನು. ಹಲವು ನಾಯಕರು, ಅರಸರು, ಅಧಿಕಾರಿಗಳು ಈತನ ಪ್ರಭುತ್ವವನ್ನು ಒಪ್ಪಿಕೊಳ್ಳದೆ ವಿರೋಧಿಸಿದರು. ಹಾಗೂ ಅತ್ತ ಉತ್ತರದಲ್ಲಿ ಬಲಗೊಂಡ ಶತ್ರುಗಳಾದ ಮಹಮ್ಮದೀಯರ ಭಯವೂ ಇತ್ತು. ಇದರಿಂದಾಗಿ ಶತ್ರುಗಳ ದಾಳಿಗಳನ್ನು ಎದುರಿಸಬೇಕಾದ ರಾಯನು ಆಡಳಿತಕ್ಕೆ ಸುಲಭವೂ ಹಾಗೂ ಸುರಕ್ಷತೆಯ ದೃಷ್ಟಿಯಿಂದ ಸಾಮ್ರಾಜ್ಯವನ್ನು ಮೂರು ಭಾಗಗಳನ್ನಾಗಿ ಮಾಡಿ ಅವುಗಳಿಗೆ ತನ್ನ ಮೂವರು ಮಕ್ಕಳನ್ನು ಮಹಾಮಂಡಲೇಶ್ವರನನ್ನಾಗಿ ನೇಮಿಸಿದನು. ಶ್ರೀರಂಗನು ಆಂಧ್ರವನ್ನು, ರಾಮದೇವನು ಕರ್ನಾಟಕ ಪ್ರಾಂತವನ್ನು ಹಾಗೂ ವೆಂಕಟಪತಿಯು ಚಂದ್ರಗಿರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ತಮಿಳು ಪ್ರದೇಶಗಳಿಗೆ ಒಡೆಯನಾದನು. ಶ್ರೀರಂಗನು ಯುವರಾಜನಾಗಿಯೂ ನೇಮಕಗೊಂಡಿದ್ದನು. ತಿರುಮಲನಿಗೆ 'ಧರಣಿವರಾಹ' ಎಂಬ ಬಿರುದಿತ್ತು. ಈತನು ಶ್ರೀ ವೈಷ್ಣವ ಮತಾರಾಧಕನೂ ಆಗಿದ್ದನು. ಹಾಗೂ ಅನ್ಯಧರ್ಮಗಳ ಮೇಲೂ ಸಹಾನುಭೂತಿಯುಳ್ಳವನಾಗಿದ್ದನು. ತಿರುಮಲನು ಕ್ರಿ.ಶ. ೧೫೭೮ ರಲ್ಲ ಕಾಲಾಧೀನನಾದನು.

**ಇಮ್ಮಡಿ ಶ್ರೀರಂಗರಾಯ – (೧೫೭೮–೮೬)**

ಶ್ರೀರಂಗನು ತಂದೆ ತಿರುಮಲರಾಯನ ಆಳ್ವಿಕೆಯ ಆರಂಭ ಕಾಲದಿಂದಲೇ ಯುವರಾಜನಾಗಿ ರಾಜ್ಯಕಾರ್ಯದಲ್ಲಿ ಪ್ರಮುಖಪಾತ್ರ ವಹಿಸಿದ್ದನು. ತಿರುಮಲನ ಆಳ್ವಿಕೆಯಲ್ಲಿಯೇ ಕಂಡುಬಂದ ಅಂತಃಕಲಹಗಳಿಂದ ಸಾಮ್ರಾಜ್ಯದಲ್ಲಿ ಒಡಕು ಹಾಗೂ ಉತ್ತರದ ಮಹಮ್ಮದೀಯ ರಾಜ್ಯಗಳ ಆಕ್ರಮಣ ಇವು ಈತನ ಕಾಲದಲ್ಲಿಯೇ ಮುಂದುವರೆಯಿತು. ರಾಜಧಾನಿಯಾದ ಪೆನುಗೊಂಡವನ್ನು

ವಿನಾಶಗೊಳಿಸಬೇಕೆಂಬ ವಿಜಾಪುರದ ಅಲಿ ಆದಿಲ್‌ಷಾಹನು ಮಾಡಿದ ಪ್ರಯತ್ನಗಳು ವಿಫಲವಾದವು. ಕ್ರಿ.ಶ. ೧೫೮೬ ರಲ್ಲಿ ಶ್ರೀರಂಗನು ಮರಣ ಹೊಂದಿದನು.

**ಒಂದನೇ ವೆಂಕಟಪತಿರಾಯ (ಕ್ರಿ.ಶ. ೧೫೮೬-೧೬೧೪) ಮತ್ತು ನಂತರದ ಅರಸರು**

ಶ್ರೀರಂಗರಾಯನು ಮರಣ ಹೊಂದಿದ ಬಳಿಕ ಆತನ ತಮ್ಮನಾದ ರಾಮದೇವನು ಮೊದಲೇ ತೀರಿಕೊಂಡುದುದರಿಂದಲೂ ಆತನ ಮಕ್ಕಳು ಚಿಕ್ಕವರಾಗಿದ್ದುದರಿಂದಲೂ ತಿರುಮಲನ ಕೊನೆಯ ಮಗನೂ, ಶ್ರೀರಂಗರಾಯನ ಕಿರಿಯ ಸಹೋದರನೂ ಆದ ಒಂದನೇ ವೆಂಕಟಪತಿಯು ಸಿಂಹಾಸನವನ್ನೇರಿದನು. ಈತನು ತನ್ನ ಅವಧಿಯಲ್ಲಿ ಗೋಲ್ಕಂಡ ಮತ್ತು ವಿಜಾಪುರದ ಶಾಹಿಗಳನ್ನು ಎದುರಿಸಬೇಕಾಯಿತು. ಉತ್ತರ ಭಾರತದಲ್ಲಿ ಆಗ ಆಳುತ್ತಿದ್ದ ಮೊಗಲ್ ಸಾಮ್ರಾಜ್ಯದ ಅಕ್ಬರನು ಕ್ರಿ.ಶ. ೧೬೦೦ ರಲ್ಲಿ ಅಹಮದ್ ನಗರವನ್ನು ಜಯಿಸಿ, ಆನಂತರ ಎರಡುಬಾರಿ ವೆಂಕಟಪತಿಯ ರಾಜ್ಯಕ್ಕೆ ರಾಯಭಾರಿಗಳನ್ನು ಕಳುಹಿಸಿದ. ಆದರೆ ಇದು ಮುಂದಿನ ಆಕ್ರಮಣಗಳಿಗೆ ನಾಂದಿಯಾಗಬಾರದೆಂದು ವೆಂಕಟಪತಿ ಅಕ್ಬರನೊಡನೆ ಹೆಚ್ಚಿನ ಸಂಬಂಧಗಳನ್ನು ಇಟ್ಟುಕೊಳ್ಳಲಿಲ್ಲ. ಈತ ರಾಜ್ಯದ ಗತವೈಭವವನ್ನು ಪುನರುಜ್ಜೀವನಗೊಳಿಸಿದನಾದರೂ ಇದು ಬಹುಕಾಲ ಉಳಿಯಲಿಲ್ಲ.

ವೆಂಕಟಪತಿಯ ಆನಂತರ ಅಧಿಕಾರಕ್ಕಾಗಿ ಅಂತಃಕಲಹಗಳು ಪ್ರಾರಂಭವಾದವು. ಆತನಿಗೆ ಗಂಡು ಮಕ್ಕಳಿಲ್ಲದ ಕಾರಣ ಆತನ ಸಹೋದರನಾದ ರಾಮರಾಯನ ಮಗ ಮುಮ್ಮಡಿ ಶ್ರೀರಂಗನು ಸಿಂಹಾಸನಾಧಿಕಾರಿಯಾದನು. ಈತನ ನಂತರದಲ್ಲಿ ಹನ್ನೆರಡು-ಹದಿಮೂರು ವರ್ಷಗಳ ಬಾಲಕನಾದ ರಾಮದೇವ ಅರಸನಾದ. ಈತ ಕ್ರಿ.ಶ. ೧೬೧೭-೩೨ ರ ವರೆಗೆ ಆಳಿದನು. ಆನಂತರ ಅಳಿಯ ರಾಮರಾಯನ ಮೊಮ್ಮಗ ಇಮ್ಮಡಿವೆಂಕಟಪತಿ ಯುವರಾಜನಾದ. ಅಂತಿಮವಾಗಿ ಇಮ್ಮಡಿ ವೆಂಕಟಪತಿರಾಯನ ತರುವಾಯ ಆರನೇ ಶ್ರೀರಂಗರಾಯನು ವಿಜಯನಗರದ ಪಟ್ಟವೇರಿದನು. ಈತನು ಇಮ್ಮಡಿ ವೆಂಕಟಪತಿರಾಯನ ತಮ್ಮನ ಕಿರಿಯ ಮಗನೂ ಹಾಗೂ ಅಳಿಯ ರಾಮರಾಯನ ತಮ್ಮನಾದ ವೆಂಕಟಾದ್ರಿಯ ಮೊಮ್ಮಗನಾದ ಗೋಪಾಲನ ದತ್ತಕ ಪುತ್ರನೂ ಆಗಿದ್ದನು. ಹೀಗೆ ಒಂದನೇ ವೆಂಕಟಪತಿರಾಯನ ನಂತರವೂ ಬಂದಂತಹ ಎಲ್ಲ ಅರಸರೂ ಅಸಮರ್ಥರಾಗಿದ್ದರಿಂದ ವಿಜಯನಗರದ ಶಕ್ತಿಯೂ ವರ್ಧಿಸಲಿಲ್ಲ. ಕ್ರಿ.ಶ. ೧೬೮೧ ರಲ್ಲಿ ಆರನೇ ಶ್ರೀರಂಗನ ಮರಣದೊಂದಿಗೆ ವಿಜಯನಗರ ಸಾಮ್ರಾಜ್ಯದ ಕೊನೆಯಾಯಿತು. ಹೀಗೆ ದಕ್ಷಿಣ ಭಾರತದಲ್ಲಿ ಸುಮಾರು ಶತಮಾನಗಳಿಗೂ ಹೆಚ್ಚುಕಾಲ (೧೪-೧೭ನೆಯ ಶತಮಾನಗಳು) ಆಳ್ವಿಕೆ ನಡೆಸಿದ ವಿಶಾಲ ಸಾಮ್ರಾಜ್ಯವೊಂದು ಅಸ್ತಂಗತವಾಯಿತು.[೫]

**ಕೃಪೆ :-**

ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಭಾಗ ೧), ಕರ್ನಾಟಕ ರಾಜ್ಯ ಸರಕಾರ, ಪು. ೨೩೪-೨೩೫.

# ವಿಜಯನಗರ ಅರಸರ ವಂಶಾವಳಿ

## ಸಂಗಮ ವಂಶ



## ಸಾಳುವ ವಂಶ



ಗುಂಡ
ನರಸಿಂಹ–೧
(೧೪೮೫–೯೧)
ತಿಮ್ಮ
ನರಸಿಂಹ--೨
(೧೪೯೧–೧೫೦೫)


## ತುಳುವ ವಂಶ



ತಿಮ್ಮ
ಈಶ್ವರನಾಯಕ
ನರಸನಾಯಕ
ವೀರ ನರಸಿಂಹ
(೧೫೦೫–೦೯)
ಕೃಷ್ಣದೇವರಾಯ
(೧೫೦೯–೨೯)
ಅಚ್ಯುತರಾಯ
(೧೫೨೯–೪೨)
ರಂಗ
ತಿರುಮಲ
ವೆಂಕಟಾದ್ರಿ
ಸದಾಶಿವ
(೧೫೪೨–೭೦)


ಅರವೀಡು ವಂಶ
ಪನ್ನಮ
ಬುಕ್ಕ
ಸಿಂಗರಾಜ
ರಾಮರಾಜ
ತಿಮ್ಮ
ಪೆದ್ದುಕೊಂಡ
ಶ್ರೀರಂಗ
(ಅಳಿಯ) ರಾಮರಾಯ
ತಿರುಮಲ
(೧೫೭೦-೭೮)
ವೆಂಕಟಾದ್ರಿ
ಶ್ರೀರಂಗ-೧
(೧೫೭೮-೮೬)
ರಾಮ
ವೆಂಕಟಪತಿ-೧
(೧೫೮೬-೧೬೧೪)
ಪೆದ್ದ ತಿರುಮಲ
ಶ್ರೀರಂಗ
ತಿರುಮಲ
ಶ್ರೀರಂಗ-೨
ರಾಮದೇವ
(೧೬೧೭-೩೨)
ವೆಂಕಟಪತಿ
(೧೬೩೨-೪೨)
ಚಿನ್ನವೆಂಕಟ ಶ್ರೀರಂಗ-೩
(೧೬೪೨-೪೬)

**ಅಡಿಟಿಪ್ಪಣಿಗಳು**

೧. ಶ್ರೀನಿವಾಸ ಎಲ್, ಹಂಪಿ ಪರಿಸರದ ಆದಿಮಾನವನ ನೆಲೆಗಳು, ೨೦೧೦, ಪು. ೭

೨. ಶಿವರುದ್ರಸ್ವಾಮಿ ಎಸ್.ಎನ್, ಮಧ್ಯಕಾಲಿನ ಭಾರತದ ಚರಿತ್ರೆ, ೨೦೧೦, ಪು. ೨೮೨

೩. ಕನ್ನಡ ವಿಷಯ ವಿಶ್ವಕೋಶ, ೨೦೦೯, ಪು. ೧೧೨೫

೪. ಶಿವರುದ್ರಸ್ವಾಮಿ ಎಸ್.ಎನ್, ಪುರ್ವೋಕ್ತ ಪು. ೩೧೩

೫. ನಾಯಕ ಹಾ. ಮಾ. (ಸಂ), ಕನ್ನಡ ವಿಷಯ ವಿಶ್ವಕೋಶ, ಪು. ೯೮೬೫–೯೭

೬. ಅದೇ ಪು. ೯೬

೭. Gazetteer of India, Bellary District

೮. ಅದೇ

೯. ಚಂದ್ರಶೇಖರ ಟಿ.ಆರ್, ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು, ಪು. ೪೭–೪೮

೧೦. ರಾಯಚೂರು ಜಿಲ್ಲಾ ಗೇಜೆಟಿಯರ್ ಪು. ೮, ೯

೧೧. ಚಿತ್ರದುರ್ಗ ಗೆಜಟಿಯರ್ ಪು ೬.೭

೧೨. Gazetteer of India, Bellary District

೧೩. ಬಳ್ಳಾರಿ ಮತ್ತು ರಾಯಚೂರು ಜಿಲ್ಲಾ ಗೆಜೆಟಿಯರ್

೧೪. ಲೀಲಾ, ೨೦೦೩, ಜೀವ ವಿಕಾಸ

೧೫. ಶ್ರೀನಿವಾಸ ಎಲ್, ಪೂರ್ವೋಕ್ತ ಪು. ೧೬೧೭

೧೬. ಶಿವತಾರಿಕ್ ಕೆ.ಬಿ, ಕರ್ನಾಟಕದ ಪುರಾತತ್ವ ನೆಲೆಗಳು, ೨೦೦೧, ಪು. ೯

೧೭. ಶ್ರೀನಿವಾಸ ಎಲ್, ೨೦೧೦, ಪುರ್ವೋಕ್ತ ಪು. ೨೦

೧೮. ಅದೇ ಪು. ೨೧, ೨೨

೧೯. ಶಿವತಾರಿಕ್ ಕೆ.ಬಿ, ಪೂರ್ವೋಕ್ತ, ಪು. ೩೬೯

೨೦. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ ಪು. ೧೧೨೫

೨೧. ಶ್ರೀನಿವಾಸ ಎಲ್, ಪೂರ್ವೋಕ್ತ, ಪು. ೭೨

೨೨. ಶಿವತಾರಿಕ್ ಕೆ.ಬಿ, ಪೂರ್ವೋಕ್ತ, ಪು. ೧೮

೨೩. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು. ೧೧೨೫

೨೪. ಶಿವಾತಾರಿಕ್ ಕೆ.ಬಿ, ೨೦೦೧, ಪೂರ್ವೋಕ್ತ, ಪು. ೨೦, ೨೧

೨೫. ಕೊಟ್ರಯ್ಯ ಸಿ.ಟಿ.ಎಂ, ಹಂಪೆ ಶಿಲಾಯುಗ ಸಂಸ್ಕೃತಿ, ಕ್ರಿಸ್ತ ಶತಬ್ಧ ಆರಂಭ ಶಾಸನಗಳಲ್ಲಿ ಪು. ೯-೧೩

೨೬. ಲಕ್ಷ್ಮಣ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ೨೦೦೪, ಪು. ೧೩

೨೭. ಅದೇ ಪು. ೮೫-೮೬

೨೮. ಕೊಟ್ರಯ್ಯ ಸಿ.ಟಿ.ಯಂ, ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪೆ, ವಿಜಯನಗರ ಅಧ್ಯಯನ ಸಂ. ೯, ಪು. ೫೪

೨೯.Channabasappa S. Patil, Pre-Vijayanagara Temple at Hampi, Vijayanagara Progress of Research, 1987-88, PP. 113-119.

೩೦. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೩, ಹಂಪಿ ಶಾಸನಗಳು, ಶಾ.ಸಂ. ೫೪

೩೧. ಮಹದೇವ ಸಿ, ಕುಮ್ಮಟದುರ್ಗದ ಅರಸರು, ಪು. ೨೩

೩೨. ಸುಧಾಕರ್, ಕರ್ನಾಟಕದ ಇತಿಹಾಸ ಸಮೀಕ್ಷೆ, ೨೦೦೮, ಪು. ೧೫೮

೩೩. ಅದೇ ಪು. ೧೬೧

೩೪. ಶಿವರುದ್ರಸ್ವಾಮಿ ಎಸ್.ಎನ್, ಮಧ್ಯಕಾಲಿನ ಭಾರತದ ಚರಿತ್ರೆ, ೨೦೧೦, ಪು. ೨೯೫, ೨೯೬

೩೫. ಸುಧಾಕರ್, ಕರ್ನಾಟಕದ ಇತಿಹಾಸ ಸಮೀಕ್ಷೆ, ಪೂರ್ವೋಕ್ತ ಪು. ೧೭೨

೩೬. ಶಿವರುದ್ರಸ್ವಾಮಿ ಎಸ್.ಎನ್, ಪೂರ್ವೋಕ್ತ, ಪು. ೩೦೭

೩೭. ಕರ್ನಾಟಕ ಗ್ಯಾಜೆಟಿಯರ್, ೧೯೯೬, ಕರ್ನಾಟಕ ಕೈಪಿಡಿ, ಕರ್ನಾಟಕ ಸರಕಾರ, ಪು. ೪೫

೩೮. ಶಿವರುದ್ರಸ್ವಾಮಿ ಎಸ್.ಎನ್, ಪೂರ್ವೋಕ್ತ, ಪು. ೩೦೯

೩೯. ಸುಧಾಕರ್, ಕರ್ನಾಟಕ ಇತಿಹಾಸ ಸಮೀಕ್ಷೆ, ೨೦೦೮, ಪು. ೧೯೨-೧೯೩

# ಅಧ್ಯಾಯ : ಮೂರು

## ರಕ್ಕಸಗಿ–ತಂಗಡಗಿ ಕಾಳಗ

೩.೧. ರಕ್ಕಸಗಿ–ತಂಗಡಗಿ ಕಾಳಗದ ಕಾರಣಗಳು

೩.೨. ರಕ್ಕಸಗಿ–ತಂಗಡಗಿ ಕಾಳಗದ ಘಟನೆಗಳು

೩.೩. ರಕ್ಕಸಗಿ–ತಂಗಡಗಿ ಕಾಳಗದ ಪರಿಣಾಮಗಳು

# ಅಧ್ಯಾಯ: ಮೂರು

## ರಕ್ಕಸಗಿ–ತಂಗಡಗಿ ಕಾಳಗ

ಕೃಷ್ಣಾ ನದಿಯ ಎಡದಂಡೆಯ ಮೇಲೆ ಸ್ಥಾಪಿತವಾಗಿರುವ ರಕ್ಕಸಗಿ ಮತ್ತು ಬಲಗಡೆಯಲ್ಲಿರುವ ತಂಗಡಗಿ ಗ್ರಾಮವು ಹುನಗುಂದದಿಂದ ತಂಗಡಗಿಯು ೨೦ ಕಿ.ಮೀ. ದೂರದಲ್ಲಿದ್ದು ರಕ್ಕಸಗಿಯು ೩೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮಗಳು ಪ್ರಾಚೀನತೆಗೆ ಅಧೀನವಾಗಿವೆ. ಯಾಕೆಂದರೆ ರಕ್ಕಸಗಿಯ ಹಳೆಯ ಊರು ಕೃಷ್ಣೆಯ ಪ್ರವಾಹಕ್ಕೆ ಖಾಲಿಯಾಗಿ ಹೋಗಿದೆ, ಹಾಳು ಬಿದ್ದಿದೆ. ೧.ಕಿಮೀ ದೂರದಲ್ಲಿ ಹೊಸ ರಕ್ಕಸಗಿ ಗ್ರಾಮವು ಇದೆ. ಅಲ್ಲಿ ದಟ್ಟವಾಗಿ ಬೆಳೆದು ನಿಂತ ಮುಳ್ಳುಕಂಟೆಗಳು ಇವೆ. ನದಿಯ ಬದಿಯಲ್ಲಿ ವಿಶಾಲ ಭೂಮಿಯ ಮೇಲೆ ಯುದ್ಧ ನಡೆದಿದ್ದು ಎಂದು ಕಣ್ಣು ಹಾಯಿಸಿದಷ್ಟು ದೂರ ಮುಳ್ಳು ಕಂಟೆಗಳು ಹಾಗೂ ಹೊಲಗದ್ದೆಗಳು ಇವೆ. ಹಾಗೂ ಅಲ್ಲಿಯೇ ಜುಮ್ಮಾ ಮಸೀದಿಯು ಕೂಡ ಇದೆ. ಇದು ಪ್ರಾಚೀನವಾದ ಮಸಿದಿ ಎಂದು ಸ್ಥಳೀಯರು ಹೇಳಿದರು.

ಇಲ್ಲಿ ನಿಜಕ್ಕೂ ಯುದ್ಧ ನಡೆದಿದ್ದು ಎಂಬುದರ ಬಗ್ಗೆ ಗೊಂದಲವಿತ್ತು ರಕ್ಕಸಗಿ ಮತ್ತು ತಂಗಡಿಗಿ ಗ್ರಾಮಗಳು ಕೃಷ್ಣಾ ನದಿಯ ಉತ್ತರ ಮತ್ತು ದಕ್ಷಿಣ ದಂಡೆಯ ಮೇಲಿವೆ. ಈ ಎರಡೂ ಗ್ರಾಮಗಳ ನಡುವಿನ ಅಂತರ ೧೪ ಕಿ.ಮಿ. ನದಿ ತೀರದಲ್ಲೇ ಸಾಗಿದರೆ ಕೇವಲ ೬–೭ ಕಿ.ಮೀ ಅಂತರ ಹೀಗಾಗಿ ಅಂತಿಮವಾಗಿ ಯುದ್ಧ ನಡೆದ್ದು ಇದೇ ರಕ್ಕಸಗಿ ಮತ್ತು ತಂಗಡಗಿ ನಡುವಿನ ಕೃಷ್ಣಾನದಿ ತೀರದ ಬಯಲು ಪ್ರದೇಶದಲ್ಲಿ ಎಂದು ತೀರ್ಮಾನಿಸಲಾಗಿದೆ. ಇಲ್ಲಿ ಕೃಷ್ಣಾನದಿಯ ಉತ್ತರ ದಂಡೆಯ ಮೇಲಿರುವ ಬೂದಿಹಾಳ ಗ್ರಾಮದಲ್ಲಿ ರಕ್ಕಸಗಿ – ತಂಗಡಗಿ ಯುದ್ದದಲ್ಲಿ ಮಡಿದ ಲಕ್ಷಾಂತರ ಸೈನಿಕರ ಅಂತ್ಯಸಂಸ್ಕಾರ ನಡೆಸಿದರು ಎಂದು ಹೇಳಲಾಗುತ್ತದೆ. ಅಂತ್ಯಸಂಸ್ಕಾರದ ನಂತರ ಇಡೀ ಪ್ರದೇಶದಲ್ಲಿ ಬೂದಿ ಹರಡಿದ್ದರಿಂದ ಇದಕ್ಕೆ ಬೂದಿಹಾಳ ಎಂದು ಹೆಸರು ಬಂತು.

ಈ ಪ್ರದೇಶದಲ್ಲಿ ರೈತರು ಹೊಲ ಉಳುವಾಗ, ಕೃಷಿ ಕಾರ್ಯಕ್ಕೆ ನೆಲ ಅಗೆಯುವಾಗಲೆಲ್ಲ ಮನುಷ್ಯರು, ಪ್ರಾಣಿಗಳ ಮೂಳೆಗಳು ದೊರೆಯುತ್ತಿದ್ದವಂತೆ. ಈ ಹಿನ್ನಲೆಯಲ್ಲಿ ರಕ್ಕಸಗಿ ಮತ್ತು ತಂಗಡಗಿ ನಡುವಣ ಪ್ರದೇಶವೇ ಯುದ್ಧ ನಡೆದ ಸ್ಥಳ ಎಂದು ಹೇಳಲಾಗಿದೆ.

ವಿಜಯನಗರ ಹಾಗೂ ಮುಸ್ಲಿಂ ಸೇನೆಗಳಿಗೆ ರಕ್ಕಸಗಿ ತಂಗಡಗಿಯಲ್ಲಿ ನಡೆದ ಯುದ್ಧದಲ್ಲಿ ಬಲಸಲಾದ ಶಸ್ತ್ರಾಸ್ತ್ರಗಳ ವಿವರಗಳು ಲಭ್ಯವಿಲ್ಲ. ಈ ಯುದ್ಧ ಕ್ಷೇತ್ರದಲ್ಲಿ ಕೆಲ ವರ್ಷಗಳ ಹಿಂದಿನವರೆಗೂ ರೈತರಿಗೆ ವಿವಿಧ ಯುದ್ಧೋಪರಣಗಳು ಸಿಕ್ಕಿದವು ಎಂದು ಹೇಳುತ್ತಾರೆ ಆದರೆ ಅವೆಲ್ಲ ಎಲ್ಲೆಲ್ಲಿ ಹೋಗಿವೆಯೋ ಯಾರಿಗೂ ಗೊತ್ತಿಲ್ಲ ಆದರೆ ರಕ್ಕಸಗಿ ಹಾಗೂ ತಂಗಡಗಿ ಯುದ್ಧದಲ್ಲಿ ವಿಜಯನಗರದ ವಿರುದ್ದ ಬಳಸಿದ್ದ ಒಂದು ಫಿರಂಗಿ ಇಂದಿಗೂ ಇದೆ. ಅದೇ ಬಿಜಾಪುರದಲ್ಲಿರುವ ಮಲ್ಲಿಕ್–ಇ–ಮೈದಾನ ತೋಪು.[೧]

**೩.೧. ರಕ್ಕಸಗಿ – ತಂಗಡಗಿ ಕಾಳಗದ ಕಾರಣಗಳು**

ಈ ಯುದ್ಧಕ್ಕೆ ನೆರವಾದ ಕಾರಣಗಳು ಹಲವಾರು ರಾಮರಾಯ ಮತ್ತು ಅವನ ನೀತಿಗಳು ಮುಖ್ಯ ಕಾರಣಗಳೆಂದು ನಂಬಿದರೂ ನಿಜವಾದ ಕಾರಣಗಳು ವಿಜಯನಗರ ಮತ್ತು ಬಹಮನಿ ರಾಜ್ಯಗಳ ಇತಿಹಾಸದಲ್ಲಿ ಆಳವಾಗಿ ಬೇರೂರಿದ್ದವು ವಿಭಿನ್ನ ಧರ್ಮ ಮತ್ತು ಸಂಸ್ಕೃತಿಗಳ ರಾಜ್ಯಗಳು ಅಕ್ಕಪಕ್ಕದಲ್ಲಿ ಏರ್ಪಟ್ಟಿದುದು ಮತ್ತು ಅವುಗಳ ಧ್ಯೇಯ ಧೋರಣೆಗಳು ಸ್ವಾಭಾವಿಕವಾಗಿ ಈ ಎರಡು ರಾಜ್ಯಗಳ ನಡುವಿನ ದೀರ್ಘ ಹೋರಾಟಕ್ಕೆ ಕಾರಣವಾಗಿದ್ದವು. ಈ ಎರಡು ರಾಜ್ಯಗಳ ತಾವು ನಮ್ಮ ತಾಳಿದನಿಂದ ಒಂದಲ್ಲ ಒಂದು ಕಾರಣದಿಂದ ನಿರಂತರವಾಗಿ ಯುದ್ಧದಲ್ಲಿ ತೊಡಗಿದ್ದವು ಈ ರಾಜ್ಯಗಳಲ್ಲಿ ದ್ವೇಷ ವೈಷಮ್ಯ ಕಲಹ ಕಚ್ಚಾಟ ಪ್ರತಿಯೊಂದು ಬಾರಿ ತೀವ್ರವಾದ ರಕ್ತ ಪಾತಯುತ ಯುದ್ಧಗಳಿಗೆ ಕಾರಣವಾಗಿದ್ದವು ಪ್ರತಿಯೊಂದು ಯುದ್ಧವೂ ತನ್ನದೇ ಆದ ನೋವಿನ ಅವಮಾನದ ಮತ್ತು ವಿನಾಶದ ಗುರುತನ್ನು ಬಿಡುತ್ತಾ ಹೋಯಿತು. ಅವುಗಳೇ ಮುಂದಿನ ಯುದ್ಧಗಳಿಗೆ ಬೀಜಗಳಾದವು. ಪ್ರತಿಯೊಂದು ಯುದ್ಧವನ್ನು ತೀವ್ರತರವಾದ ದ್ವೇಷ ಭಾವನೆಯಿಂದ ನಡೆಸಲಾಯಿತು ರಕ್ಕಸ – ತಂಗಡಗಿ ಅಥವಾ ತಾಳಿಕೋಟಿ ಯುದ್ಧವು ಇಂತಹ ಯುದ್ಧಗಳಲ್ಲಿ ಅಂತಿಮ ಯುದ್ಧವಾಗಿದ್ದಿತು.

ರಾಮರಾಯನನ್ನು ಈ ಯುದ್ಧಕ್ಕೆ ಸಂಪೂರ್ಣ ಹೊಣೆ ಮಾಡಲಾಗಿದೆ ಕೆಲವು ಇತಿಹಾಸಕಾರರು ಇವನನ್ನು ಈ ದುರಂತದ ನಾಟಕದ ಖಳ ನಾಯಕನನ್ನಾಗಿ ಚಿತ್ರಿಸಿದ್ದಾರೆ ರಾಮರಾಯನ ವಿಪರೀತವಾದ ಅಹಂಭಾವ ಮತ್ತು ಷಾಹಿ ರಾಜ್ಯಗಳ ವ್ಯವಹಾರಗಳಲ್ಲಿ ವಿಪರೀತವಾಗಿ ತಲೆಹಾಕುತ್ತ ಒಂದನ್ನು ಇನ್ನೋಂದರ ವಿರುದ್ದ ಎತ್ತಿಕಟ್ಟುವ ನೀತಿ ಈ ಯುದ್ಧಕ್ಕೆ ತಕ್ಷಣವೇ ಕಾರಣವಾಯಿತೆಂದು ನಂಬಿದರು ಸಹ ಅವನೊಬ್ಬನನ್ನೇ ಈ ಯುದ್ಧಕ್ಕೆ ಹೊಣೆಗಾರನನ್ನಾಗಿ ಮಾಡುವುದು ಅಷ್ಟು ಸಮಂಜಸವಾಡಗಿಲ್ಲ, ಇವನು ಇದಕ್ಕೆ ನಿಮಿತ್ತ ಮಾತ್ರ ಆಗಿದ್ದನು ಇವನ

ರಾಜಕಾರಣದ ನೀತಿ ಮತ್ತು ಚಟುವಟಿಕೆಗಳು ಬಹುಕಾಲದಿಂದ ಹಿಡಿದಿಟ್ಟಿದ್ದ ಸ್ಫೋಟವನ್ನು ಅಸ್ಫೋಟಗೊಳಿಸದವೆಂದು ಹೇಳಬಹುದು.

ಕೆಲವು ವಿದ್ವಾಂಸರ ಪ್ರಕಾರ ವಿಜಯನಗರದ ಸೈನ್ಯಗಳು ಅಹಮದ್‌ನಗರದ ಮೇಲಿನ ದಾಳಿಯ ಕಾಲದಲ್ಲಿ ನಡೆಸಿದ ಕಗ್ಗೊಲೆಗಳು ಮತ್ತು ದೌರ್ಜನ್ಯಗಳು ಈ ಯುದ್ಧಕ್ಕೆ ನೇರವಾಗಿ ಕಾರಣವಾದವು ಎಂದು ನಂಬಿದ್ದಾರೆ ಇದರಿಂದ ಉಂಟಾದ ವಿನಾಶಕಾರಿ ಪರಿಣಾಮಗಳು ಮುಸ್ಲೀಂ ಸುಲ್ತಾನರನ್ನು ಎಚ್ಚರಗೊಳಿಸಿದವು. ಅವರು ವಿಜಯನಗರದ ವಿರುದ್ಧ ಅಂತಿಮ ಹೋರಾಟಕ್ಕೆ ಒಂದಾಗಲು ನೆರವಾದವು ಎಂಬುದು ಇವರ ವಾದ ಆದರೆ ಈ ವಾದದಲ್ಲಿ ಅಷ್ಟಾಗಿ ಹುರುಳಿಲ್ಲ ಏಕೆಂದರೆ ಇಂತಹ ಯುದ್ಧಗಳು ದೌರ್ಜನ್ಯಗಳು ಮತ್ತು ಕೊಲೆಗಳು ಆಗಿನ ಕಾಲದಲ್ಲಿ ಸಾಮಾನ್ಯವಾಗಿದ್ದವು ಬಹಮನಿ ರಾಜ್ಯಗಳು ಕೂಡ ತಮ್ಮ ವಿಜಯದ ಕಾಲದಲ್ಲಿ ಇದಕ್ಕಿಂತ ತ್ರೀವ್ರ ಕಗ್ಗೊಲೆ ಮತ್ತು ವಿನಾಶ ಕಾರ್ಯ ನಡೆಸಿದ್ದವು ಫೆರಿಸ್ತ ಮತ್ತು ಇತರ ಮುಸ್ಲೀಂ ಬರಹಗಾರರು ನೀಡಿರುವ ಮುಸ್ಲೀಂ ಸುಲ್ತಾನರು ವಿಜಯನಗರ ಮೇಲೆ ಧಾಳಿ ಕಾಲದಲ್ಲಿ ನಡೆಸಿದ ಕಗ್ಗೊಲೆ ಮತ್ತು ದೌರ್ಜನ್ಯಗಳ ವಿವರಣೆಯನ್ನು ಗಮನಿಸಿದಲ್ಲಿ ಮೈ ಜುಮ್ಮೆನ್ನುತ್ತದೆ. ಆದ್ದರಿಂದ ಈ ಯುದಕ್ಕೆ ದೀರ್ಘವಾದ ಐತಿಹಾಸಿಕ ಕಾರಣಗಳು ಕಾರಣವೆನ್ನುವುದು ಸಮಂಜಸ. ತೀವ್ರವಾದ ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ದ್ವೇಷ ವೈಷಿಮ್ಯಗಳು ಈ ಯುದ್ದಕ್ಕೆ ಮುಖ್ಯ ಕಾರಣವಾಗಿದ್ದವು ಪ್ರತಿಯೊಬ್ಬ ಸುಲ್ತಾನನೂ ಹಿಂದೂ ಸಾಮ್ರಾಜ್ಯವಾಗಿದ್ದ ವಿಜಯನಗರದ ವಿರುದ್ದ "ಜೀಹದ್" ಯುದ್ಧವನ್ನು ಹೂಡುವುದು ತನ್ನ ಧಾರ್ಮಿಕ ಕರ್ತವ್ಯವೆಂದು ತಿಳಿದಿದ್ದನು.

ರಾಜಕೀಯವಾಗಿ ಈ ಎರಡು ರಾಜ್ಯಗಳ ಅಶೋತ್ತರಗಳು ಪರಸ್ಪರ ವಿರುದ್ಧವಾಗಿದ್ದವು. ಒಂದು ಇನ್ನೊಂದನ್ನು ಹತ್ತಿರಕ್ಕೆ ತನ್ನ ಮೇರೆಗಳನ್ನು ವಿಸ್ತರಿಸುವಲ್ಲಿ ಮತ್ತು ಸಾರ್ವಭೌಮತ್ವ ಸ್ಥಾಪನೆಯಲ್ಲಿ ಆಸಕ್ತವಾಗಿದ್ದವು. ಇದು ಘರ್ಷಣೆಯನ್ನು ಅನಿವಾರ್ಯವಾಗಿಸಿದ್ದಿತು ಆರ್ಥಿಕವಾಗಿ ವಿಜಯನಗರದ ಕಣ್ಣು ಕೊರೈಸುವಂತಹ ಸಂಪತ್ತು

ವೈಭವಗಳು ಬಹಮನಿ ಸುಲ್ತಾನರಿಗೆ ಕಣ್ಣು ಸೂಡಾಗಿದ್ದವು ಅಷ್ಟೇನು ಸಂಪದ್ಭರಿತವಾದ ನಾಡಿನ ದೊರೆಗಳಾಗಿದ್ದ ಬಹಮನಿ ಸುಲ್ತಾನರು ವಿಜಯನಗರದ ಸಂಪತ್ತನ್ನು ಸೂರೆಗೊಳ್ಳಲು ಯುದ್ಧಾಂಕಾಂಕ್ಷಿಗಳಾಗಿದ್ದುದು ಸ್ವಾಭಾವಿಕವಾಗಿದ್ದಿತು ಇಂತಹ ಆಸೆ ಆಕಾಂಕ್ಷೆಗಳು ದ್ವೇಷ ವೈಷಮ್ಯಗಳು ಮತ್ಸರದ ಭಾವನೆಗಳು ಈ ಎರಡು ರಾಜ್ಯಗಳ ನಡುವಿನ ನಿರಂತರ ಯುದ್ಧದತೆ ಕಾರಣವಾದವು ರಕ್ಕಸಗಿ – ತಂಗಡಗಿ ಯುದ್ಧ ಈ ಯುದ್ಧಗಳಲ್ಲಿ ಕಟ್ಟಕಡೆಯ ಪ್ರಮುಖ ಯುದ್ಧವಾಗಿದ್ದಿತು ರಾಮರಾಯನು ಜೀವಂತವಾಗಿರುವವರೆಗೆ ಮತ್ತು ವಿಜಯನಗರ ಸಾಮ್ರಾಜ್ಯ ತಮ್ಮ ಮಧ್ಯೆ ಸಮರ್ಥವಾಗಿ ಇರುವವರೆಗೆ ತಮಗೆ ಶಾಂತಿ ಮತ್ತು ರಕ್ಷಣಯಿಲ್ಲ ಎಂಬ ಅರಿವು ಮೂಡಿ

ನಾಲ್ಕು ಬಹಮನಿ ರಾಜ್ಯಗಳು ಒಂದುಗೂಡಲು ನೀರ್ಧರಿಸಿದವು. ಆದರಂತೆ ಅವುಗಳ ಸಂಯುಕ್ತ ಸೈನ್ಯಗಳು ಸಾಮ ಮತ್ತು ಉಳಿವಿನ ಹೋರಾಟಕ್ಕಾಗಿ ೧೫೬೪ರ ಡಿಸೆಂಬರ್‌ನಲ್ಲಿ ವಿಜಯನಗರದತ್ತ ಧಾವಿಸಿದವು.

ಮುಸ್ಲೀಂ ಸೈನ್ಯಗಳು ಮುನ್ನುಗ್ಗಿ ಬರುತ್ತಿದ್ದರೂ ರಾಮರಾಯನು ಯುದ್ದಕ್ಕೆ ಸಿದ್ದತೆ ಮಾಡಿಕೊಂಡಿರಲಿಲ್ಲ ಇದಕ್ಕೆ ಅವನ ಅಹಂಭಾವ ಮತ್ತು ತನ್ನ ಸೈನಿಕ ಶಕ್ತಿಯ ಬಗ್ಗೆ ಅವನಿಗಿದ್ದ ಅಪರಿಮಿತ ನಂಬಿಕೆಯೇ ಕಾರಣವಾಗಿ ಅವನು ಇದನ್ನು ತೀವ್ರವಾಗಿ ಪರಿಗಣಿಸಲಿಲ್ಲ ಮುಸ್ಲಿಂ ಸೈನಿಕರ ಮುನ್ನುಗ್ಗುವಿಕೆ ವಿಜಯನಗರದ ಪ್ರಶಾಂತ ಜನ ಜೀವನದ ಮೇಲೆ ಯಾವುದೇ ಪ್ರಭಾವ ಬೀರಲಿಲ್ಲ ಕ್ಷಿಪ್ರವಾಗಿ ಒದಗುವ ಪ್ರಳಯದ ಯಾವುದೇ ಭೀತಿಯಿಲ್ಲದೆ ಜನರು ತಮ್ಮ ಎಂದಿನ ಜೀವನದ ಚಟುವಟಿಕೆಗಳನ್ನು ಮುಂದುವರಿಯಲಿಲ್ಲ ಅವನಿಗೆ ಬಹುಬೇಗ ತನ್ನ ತಪ್ಪಿನ ಅರಿವಾಯಿತು. ಎಂಬತ್ತು ವರ್ಷದ ವಯೋವೃದ್ಧನಾಗಿದ್ದ ರಾಮರಾಯನು ಅತ್ಯಂತ ಉತ್ಸಾಹದಿಂದ ತ್ವತಿತವಾಗಿ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ತಾನೇ ಸ್ವತಃ ದಂಡ ನಾಯಕತ್ವವನ್ನು ವಹಿಸಿಕೊಂಡು ಮುನ್ನುಗ್ಗಿದನು.[೨]

ವಿಜಯನಗರ ಮತ್ತು ಬಹಮನಿ ಸಂಯುಕ್ತ ಸೈನ್ಯಗಳ ನಡುವಿನ ಐತಿಹಾಸಿಕ ಯುದ್ಧ ೧೬೫೬ರ ಜನವರಿ ೨೩ ರಂದು ಬಿಜಾಪುರ ಜಿಲ್ಲೆಯ ತಾಳಿಕೋಟೆಯ ಹತ್ತಿರದ ರಕ್ಕಸಗಿ ಮತ್ತು ತಂಗಡಗಿ ಎಂಬ ಗ್ರಾಮಗಳ ನಡುವಿಣ ವಿಶಾಲ ಬಯಲಿನಲ್ಲಿ ನಡೆಯಿತು ತಾಳಿಕೋಟೆಯ ಹತ್ತಿರದ ಜರುಗಿದ ಯುದ್ಧವಾದುದರಿಂದ ಇದಕ್ಕೆ ತಾಳಿಕೋಟೆ ಯುದ್ಧವೆಂತಲೂ, ರಕ್ಕಸಗಿ ಮತ್ತು ತಂಗಡಗಿ ಗ್ರಾಮಗಳ ನಡುವೆ ನಡೆದ ಯುದ್ಧವಾದುದರಿಂದ ಇದಕ್ಕೆ ರಕ್ಕಸಗಿ –ತಂಗಡಗಿ ಯುದ್ಧವೆಂತಲೂ ಹೆಸರು ಬಂದಿದೆ, ಇದೇ ಯುದ್ಧವನ್ನು ಪ್ರೊ.ಶೇರ್ವಾನಿಯವರು ಬನ್ನಿಹಟ್ಟಿ ಯುದ್ಧವೆಂದು ಕರೆದಿದ್ದಾರೆ.

೧೫೬೫ ರ ಜನವರಿ ೨೩ ರಂದು ಎರಡೂ ಸೈನ್ಯಗಳ ನಡುವೆ ಬೆಳಗಿನಿಂದ ಸಂಜೆಯವರೆಗೆ ಭಿಕರ ಹೋರಾಟ ನಡೆಯಿತು ಹಿಂದೂ ಸೈನಿಕರು ರಾಮರಾಯನ ನಾಯಕಯತ್ವದಿಂದ ಉತ್ತೇಜಿತರಾಗಿ ಅತೇವ ಧೈರ್ಯ ಶೌರ್ಯಗಳಿಂದ ಹೋರಾಡಿ ಸಹಸ್ರಾರು ಶತೃ ಸೈನಿಕರನ್ನು ಕೊಲೆಗೈದರು ಎರಡೂ ಕಡೆ ಸಾವು ನೋವುಗಳು ಅಧಿಕವಾಗಿದ್ದವು ಈ ಮಧ್ಯಾಹ್ನದವರೆಗೂ ಹಿಂದೂಗಳ ಕೈ ಮೇಲಾಗಿದ್ದಿತು ಈ ಸಂದರ್ಭದಲ್ಲಿ ನಡೆದ ಕೆಲವು ಘಟನೆಗಳು ಯುದ್ಧದ ಗತಿಯನ್ನು ಬದಲಾಯಿಸಿದವು ಇಲ್ಲಿಯವರೆಗೆ ವಿಜಯನಗರದ ಸೈನ್ಯದೇಂದಿಗೆ ಹೋರಾಟ ಮಾಡುತ್ತಿದ್ದ ಸುಮಾರು ೮೦ ಸಾವಿರ ಮುಸ್ಲಿಂ ಸೈನಿಕರು ತಮ್ಮ ದಂಡನಾಯಕರಾಗಿದ್ದ ಗಿಲಾನಿ ಸಹೋದರರ ನೇತೃತ್ವದಲ್ಲಿ ತಮ್ಮ ಮತಬಾಂಧವರಾಗಿದ್ದ ಮುಸ್ಲಿಂ ಸೈನಿಕರನ್ನು ಸೇರಿಕೊಂಡರು ಇದೇ ಸಮಯದಲ್ಲಿ ಬಹಮನಿ ಸುಲ್ತಾನರು ತಮ್ಮ ಶಕ್ತವಾದ ಫಿರಂಗಿ ಪಡೆಯನ್ನು ಯುದ್ಧದ

ಕೊಕ್ಕೆ ಇಳಿಸಿದರು ಈ ಫಿರಂಗಿ ಪಡೆಯ ದಾಳಿ ಹಿಂಧೂ ಸೈನಿಕರನ್ನು ಭೀತಿಗೊಳಿಸಿತು ಇದೇ ಕಾಲದಲ್ಲಿ ರಾಮರಾಯನು ಆಕಸ್ಮಿಕವಾಗಿ ಶತೃಗಳ ಕೈಸೆರೆಯಾದನು ಗೋಲ್ಕೊಂಡದ ಸುಲ್ತಾನನಾದ ಹುಸೇನ್‌ಷಹನು ಅವನ ಶಿರವನ್ನು ಕತ್ತರಿಸಿ, ಅದನ್ನು ಉದ್ದಾವದ ಈಟೆಯ ಮೇಲಿಟ್ಟು ಯುದ್ಧ ರಂಗದಲ್ಲಿ ಪ್ರದರ್ಶಿಸಿದನು. ಆಗ ಅವನು ಹೇಳಿದುದು "ಈಗ ನನ್ನ ಸೇಡನ್ನು ತೀರಿಸಿಕೊಂಡಿದ್ದೇನೆ ದೇವರು ನನಗೆ ಏನನ್ನಾದರೂ ಮಾಡಲಿ" ತಮ್ಮ ನಾಯಕನ ಸೆರೆ ಮತ್ತು ಕಾಲೆಯ ಸುದ್ಧಿಯನ್ನು ಕೇಳಿದ ವಿಜಯನಗರದ ಸೈನಿಕರು ದಿಕ್ಕಾಸಾಲಾಗಿ ಓಡಿದರು ಇದರಿಂದ ಬಹಮನಿ ಸೈನ್ಯಗಳಿಗೆ ಸಂಪೂರ್ಣ ವಿಜಯ ದೊರೆಯಿತು. ರಾಮರಾಯನ ತಮ್ಮಂದಿರಾದ ವೆಂಕಟ ಮತ್ತು ತಿರುಮಲರು ಸೈನ್ಯವನ್ನು ಒಂದುಗೂಡಿನ ಯುದ್ಧ ಮುಂದುವರೆಸಲು ಯಾವುದೇ ಯತ್ನ ಮಾಡಲಲ್ಲಿ ಅವರು ಹೇಡಿಗಳಂತೆ ಯುದ್ಧ ರಂಗದಿಂದ ಓಡಿ ಹೋದರು ಫೆರಿಸ್ತನು ಬರೆಯುವಂತೆ ಹಿಂದೂಗಳನ್ನು ಮುಸ್ಲಿಂವರು ನಿರ್ದಯವಾಗಿ ಕೊಲೆ ಮಾಡಿದರು ತಾಳಿಕೋಟೆ ಯುದ್ಧವು ವಿಜಯನಗರದ ಸೈನ್ಯಗಳ ಸಂಪೂರ್ಣ ಪರಾಭವದಲ್ಲಿ ಮುಕ್ತಾಯವಾಯಿತು ಅವರಿಗಾದ ನಷ್ಟ ಅಪರಿಮಿತ ಯುದ್ಧರಂಗದಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಸೈನಿಕರು ಕೊಲೆಯಾದರು ವಿಜಯ ಶತೃ ಸೈನಿಕರ ಲೂಟಿ ಎಷ್ಟಿತು ಎಂದರೆ "ಅದರ ಪ್ರತಿಯೊಬ್ಬ ಸೈನಿಕನು ಬಂಗಾರ, ಆಭರಣ, ಶಸ್ತ್ರಾಸ್ತ್ರ, ಗುಡಾರ, ಕುದುರೆ ಮತ್ತು ಗುಲಾಮರನ್ನು ಪಡೆದು ಶ್ರೀಮಂತರಾದರು, ಏಕೆಂದರೆ ಸುಲ್ತಾನರು ಆನೆಗಳನ್ನು ಮಾತ್ರ ತೆಗೆದುಕೊಂಡು ಉಳಿದಲ್ಲವನ್ನು ಸೈನಿಕರಿಗೆ ಬಿಟ್ಟುಕೊಟ್ಟರು". ಯುದ್ಧರಂಗದಿಂದ ವಿಜಯನಗರಕ್ಕೆ ಧಾವಿಸಿದ ತಿರುಮಲನು ೧೫೫೦ ಆನೆಗಳ ಮೇಲೆ ಅರಮನೆಯ ಸಂಪತ್ತನ್ನೆಲ್ಲ ತುಂಬಿಕೊಂಡು ಸೆರೆಯಾಳಾಗಿದ್ದ ಸದಾಶಿವರಾಯನನ್ನು ಕರೆದುಕೊಂಡು ಪೆನುಹೊಂಡೆಗೆ ಹೋದನು.[೩]

### ೩.೨. ರಕ್ಕಸಗಿ – ತಂಗಡಗಿ ಕಾಳಗದ ಘಟನೆಗಳು

ತಾಳಿಕೋಟೆಯ ಸಮೀಪದಲ್ಲಿಯ ಎರಡು ಗ್ರಾಮಗಳೇದರೆ "ರಕ್ಕಸಜಿ & ತಂಗಡಗಿ ಇವೆರೆಡು ಸೇರಿ ರಕ್ಕಸ – ತಂಗಡಗಿ ಎಂಬ ಹೆಸರು ಎಂದಿದೆ ಈ ಸ್ಥಳದಲ್ಲೆ ಹಿಂದು ಮುಸ್ಲಿಂ ಸೈನ್ಯಗಳು ಸಂಂಧಿಸಿದ್ದು ಮಧ್ಯಾಹ್ನ ಪ್ರಾರಂಭವಾದ ಯುದ್ಧದಲ್ಲಿ ೮೦ ವರ್ಷದ ದೊರೆ ರಾಮರಾಯನು ಅಂಬಾರಿಯನ್ನೇರಿ ಯುದ್ಧ ಸನ್ನದ್ಧವಾದನು. "ವಿನಾಶ ಕಾಲೆ ವಿಪರೀತ ಬುದ್ಧಿ", ಎಂಬಂತೆ ಅಶ್ವವನ್ನೇರಿದರೆ ಯುದ್ಧ ಸುಲಭ ಎಂಬ ಅವನ ಸಂಗಡಿಗರ ಮಾತು ರುಚಿಸಲಲ್ಲಿ ವೆಂಕಟಾದ್ರಿಯ ಕೈಕೆಳಗಿದ್ದ ೨ ಲಕ್ಷ ಕಾಲಾಳುಗಳು ೨೫,೦೦೦ ಅಶ್ವ ಸೈನಿಕರು ೫೦೦ ಆನೆ ಮಾವುತರು ಯುದ್ಧವನ್ನಾರಂಭಿಸಿದರು ಭೀಕರವಾಗಿ ನಡೆಯುತ್ತಿದ್ದ ಯುದ್ಧದಲ್ಲಿ ಶತ್ರುಗಳು ತಮಗೆ ಸೋಲು ಖಚಿತವೆಂದೂ ನಿರಾಶ ಭಾವನೆ ತೋಡಗಿದರು.

ಆ ಸಮಯದಲ್ಲಿ ರಮೀಖಾನನೆಂಬ ಶತ್ರು ಸರದಾರನು ಫಿರಂಗಿಳಿಂದ ರಾಮರಾಯನ ಕಡೆಯ ಅನೇಕ ಸೈನಿಕರನ್ನು ಸುಟ್ಟನು ಇದು ಸಾಲದೆಂಬಂತೆ ದುರ್ಘಟನೆ ಎಂದು ಹಿಂದೂ

ಶಿಬಿರದಲ್ಲಿ ನಡೆಯಿತು ರಾಮರಾಯನು ತನ್ನ ಮಕ್ಕಳಂತೆ ನೋಡಿಕೊಂಡ ಇಬ್ಬರು ಮುಸ್ಲಿಂ ಮಹಾನ್‌ದಂಡನಾಯಕರುಗಳು ವಂಚನೆ ಗೈದರು ಈ ಇಬ್ಬರು ಇದ್ದಕಿದಂತೆಯೇ ತಮ್ಮ ಸೈನ್ಯವನ್ನು ವಿಜಯನಗರದ ಸೈನ್ಯದ ವಿರುದ್ಧವೇ ಹೋರಾಡುವಂತೆ ಮಾಡಿ ಹಾಹಾಕಾರವನ್ನು ಎಬ್ಬಿಸಿದರು ಇವರಲ್ಲಿ ಪ್ರಮುಖರು ಐನ್-ಉಲ್-ಮುಲ್& ಇವನ ತಂದೆಯನ್ನು ಆದಿಲ್‌ಶಾಹನು ಕೊಂದಾಗ ಅಲ್ಲಿಂದ ಓಡಿ ಬಂದು ರಾಮರಾಯನಲ್ಲಿ ಆಶ್ರಯ ಪಡೆದ ಇವನು ಕೊನೆಗೂ ತನ್ನ ಬುದ್ಧಿಯನ್ನು ತೋರಿದನು ಹಿಂಧೂ ಸೈನ್ಯದಲ್ಲಿ ಈ ವೈಪರಿತ್ಯದಿಂದ ಕೋಲಾಹಲ ಉಂಟಾಯಿತು ರಾಮರಾಯನಾಗ ಏನು ಮಾಡಲು ತೋಚದೆ ಯುದ್ಧ ವಿಮುಖನಾಗಲು ಸಿಬಿಕೆಯನ್ನೇರಿದನು.

'ಅಷ್ಟೇ' ಆಗ ಅಹಮದ್‌ನಗರದ ಸೈನ್ಯದ ಆನೆಯೊಂದು ಸಿಬಿಕೆಯೆಡೆಗೆ ಬಂದೀತು ಸಿಬಿಕೆ ವಾಹಕರು ಹೆದರಿ ಓಡಿದರು ಸುಲಭದಲ್ಲಿ ರಾಮರಾಯನನ್ನು ಶತ್ರು ಸೈನಿಕರು ಹುಸೇನ್ ನಿಜಾಂ ಷರಾಹನಿಗೆ ಸುದ್ಧಿ ತಿಳಿಸಿದರು ಆತನು ಹಿಂದೆ ಮುಂದೆ ನೋಡದೆ ನಿಜಾಂಶಾಹನು ರಾಮರಾಯನ ಶಿರಚ್ಛೇದ ಮಾಡಿಸಿದನು ಅವನ ರುಂಡ ಕೆಳಗೆ ಬಿದ್ದಾಗ ತನ್ನ ಸೇಡು ಇಂದಿಗೆ ತೀರಿತು ಎಂದು ಷಾನು ಹರ್ಷಿತನಾದನು.

ದೊರೆಯ ರುಂಡವನ್ನು ಭಲ್ಲೆಗೆ ಚುಚ್ಚಿ ಎತ್ತಿ ತೋರಿಸಿದಾಗ ಹತಭಾಗ್ಯರಾದ ಹಿಂಧೂಗಳು ದು:ಖಿತರಾದರು . ಶಾಹನ ಸೈನಿಕರು ಹಿಂಧೂ ಸೈನಿಕರನ್ನು ಸಿಕ್ಕಸಿಕ್ಕಂತೆಯೇ ಕತ್ತರಿಸಿ ಹಾಕಿದರು ಈ ಸಮಯದಲ್ಲಿ ವಿಜಯನಗರದ ಸಾಮ್ರಾಜ್ಯದ ತಿರುಮಲನು ೫೦೦ ಆನೆಗಳ ಮೇಲೆ ವಜ್ರ ವೈಢೂರ್ಯ ತೆಗೆದುಕೊಂಡು ಪೆನುಗೊಂಡಕೆ ಧಾವಿಸಿದನು ಈ ಮುಸ್ಲಿಂ ನೈನ್ಯವು ವಿಜಯನಗರದ ಕಲ್ಲು ಕಲ್ಲಿನ ಮೇಲೆ ಸೇಡು ತೀರಿಸಿಕೊಂಡಿತು ಹಂಪೆಯನ್ನು ಪ್ರೇತವನವನ್ನಾಗಿ ಮಾಡಿ ಬಿಟ್ಟಿತು ಕತ್ತಿ, ಹಾರೆ, ಗದಾರಿ, ಕೊಡಲಿ, ಮುಂತಾದ ನಾನಾ ಆಯುಧಗಳಿಂದ, ಮುಸ್ಲಿಂರು ಕೈಗೆ ಸಿಕ್ಕಿದನ್ನೆಲ್ಲ ಕಡಿದುಹೋಗೆದು ತಮ್ಮ ಕರಾಳ ಕೃತ್ಯಗಳನ್ನು ದಿನದಿನವೂ ಮುಂದುವರಿಸಿದರು. ಈ ಅನಾಹುತ ಪರಂಪರೆ ದೃಶ್ಯಗಳು ಇನ್ನೆಲ್ಲೂ ನಡೆದಿಲ್ಲವೆಂದು ಪ್ರಖ್ಯಾತ ವಿದ್ವಾಂಸ "ಸಿವಿಲ್" ಹೇಳಿದಾರೆ ಕ್ರಿ.ಶ.೧೫೬೫ ರಲ್ಲಿ ನಡೆದ ಭಯಂಕರ ಹಿಂಧೂ ಸ್ವತಂತ್ರ ಸಾಮ್ರಾಜ್ಯ ಪೂರ್ಣವಾಗಿ ಪತನಗೊಂಡಿತು ಈ ರಕ್ಕಸಗಿ – ತಂಗಡಗ ಕಾಳಗವು ೩ ಹಂತಗಳಲ್ಲಿ ನಡೆದಿದೆ.[೪]

**ಮೊದಲ ಹಂತ**

ಎಲ್ಲ ಇತಿಹಾಸಕಾರರು ಅನಂತರದ ವಿದ್ವಾಂಸರು ಗುರುತಿಸಿದಂತೆ ಅಹಮದನಗರ ನಿಜಾಮಶಾಹಿ, ಗೋಲ್ಕಂಡದ ಕುತುಬಶಾಹಿ, ಬಿಜಾಪುರದ ಆದಿಲಶಾಹಿ ಮತ್ತು ಬೀದರದ ಬರೀದಶಾಹಿ ನಾಲು & ಶಾಹಿ ರಾಜರುಗಳ ಒಕ್ಕೂಟ ಸೈನ್ಯ ಒಂದೆಡೆ ಸೇರಿ ತಾಳಿಕೋಟೆಯ

ಪರಿಸರದಲ್ಲಿ ಬೀಡು ಬಿಟ್ಟಿತು ಇದರಲ್ಲಿ ಸಂಶಯವಿಲ್ಲ ಹಾಗೆ ಬಂದ ನಾಲ್ಕು ರಾಜ್ಯಗಳ ಅಪಾರ ಸೈನ್ಯವೆಲ್ಲವೂ ತಾಳಿಕೋಟೆಗೆ ಬಂದಿರುವ ಸಾಧ್ಯವೇ ಇಲ್ಲ ತಾಳಿಕೋಟೆಯ ಪೂರ್ವದಿಂದ ಬಂದ ಗೊಲ್ಕಂಡದ ಕುತುಬಶಾಹೀ ಸೈನ್ಯ ತಾಳಿಕೋಟೆಯ ಎಡಭಾಗದಲ್ಲಿ ಸುಮಾರು ಅಂತರದಲ್ಲಿಯ ದೇವಾಪುರ ಹುಣಸಗಿಳಲ್ಲಿ ಠಾಣ್ಯ ಹಾಕಿದ್ದರೆ ನೇರವಾಗಿ ಬಂದ ಅಹಮದನಗರ ಮತ್ತು ಬೀದರ ಸೈನ್ಯಗಳು ತಾಳಿಕೋಟೆಯ ಪರಿಸರದಲ್ಲೂ ವಿಜಾಪುರದಿಂದ ಬಂದ ಸೈನ್ಯ ತಾಳಿಕೋಟೆಯ ಬಲಭಾಗದಲ್ಲಿ ಪಶ್ಚಿಮಕ್ಕೆ ಢವಳಗಿಯಿಂದ ಮುದ್ದೇಬಿಹಾಳ ಮತ್ತು ಕಿಂಚಿತ್ ಮುಂದೆ ಬಂದು ಠಾಣ್ಯ ಹೂಡಿರುವ ಸಾಧ್ಯತೆ ಇದೆ. ಮುಂದೆ ಸೈನ್ಯವ್ಯೂಹ ರಚಿಸುವಾಗ ಬಣ್ಣಿಸಿದ ವಿವರ ಮತ್ತು ಬಹುತೇಕ ದಾಖಲೆಗಳು ಇದನ್ನೇ ಪುಸ್ಟೀಕರಿಸುತ್ತವೆ.

ವಿಜಯನಗರ ಅಪಾರವಾದ ಒಕ್ಕೂಟ ಸೈನ್ಯದ ಎರಡು ಪಟ್ಟಿನ ಸೈನ್ಯವಯ ವಿಜಯನಗರದಿಂದ ಹೊರಟು ತುಂಗಭದ್ರೆಯನ್ನು ದಾಟಿ ಕುಷ್ಟಗಿ ಮತ್ತು ತಾವರಗೆರೆಗಳ ಮಧ್ಯದಲ್ಲಿ ಬೀಡುಬಿಟ್ಟಿತು ಎಂದು ಬಖರಕಾರನು ಹೇಳಿದ್ದರಲ್ಲೂ ಅನುಮಾನವಿಲ್ಲ ಮಧ್ಯದ ಬಯಲು ಕೃಷ್ಣಾನದಿಯಿಂದ ಕೇವಲ ೨೦ ರಿಂದ೨೪ ಮೈಲುಗಳಷ್ಟು ಅಂತರದಲ್ಲಿದೆ ಅಂದರೆ ಸೈನ್ಯದ ಕೊ ಕುಷ್ಟಗಿ ತಾವರೆಗೆರಗಳ ಮಧ್ಯದಲ್ಲಿದ್ದರೆ ತುದಿಯು ಕೃಷ್ಣಾನದಿಯ ದಂಡೆಗೆಯೇ ಬಂದಿರುತ್ತದೆ. ಸೈನ್ಯದ ಅಂಕಿ – ಸಂಖ್ಯೆಗಳಿಂದ ಇದನ್ನು ಗುರುತಿಸಬಹುದು ಫಿರಸ್ತಾ ಹೇಳುವ ಹಾಗೆ ವಿಜಯನಗರದ ಒಟ್ಟು ಸೈನ್ಯ ೬೦ ಸಾವಿರ ಕುದುರೆ ಸವಾರರು, ೧ ಲಕ್ಷ ಪದಾತಿದಳ, ೧ ಸಾವಿರ ಆನೆಗಳು, ೨ ಸಾವಿರ ಮಹಮ್ಮದೀಯ ಬಿಲ್ಲುಗಾರರು, ತೋಪುಗಳು, ಆಕಾಶ ಬಾಣಗಳು ಇತ್ಯಾದಿ ಜೊತೆಗೆ ಸೈನ್ಯ ಸಿಬ್ಬಂದಿ ಇಷ್ಟೇ ಸಂಖ್ಯೆಯಲ್ಲಿತ್ತು . ಇದರಲ್ಲಿಯ ಮುಂಚೂಣಿಯ ಸೈನ್ಯದವರು ಆಗಲೇ ಕೃಷ್ಣಯ ದಂಡೆಯನ್ನು ಮುಟ್ಟಿ ಬಲ ದಂಡೆಯಲ್ಲಿ ಪೂರ್ವ ಪಶ್ಚಿಮವಾಗಿ ಸುಮಾರು ೧೫ ಮೈಲುಗಳಷ್ಟು ಸ್ಥಳದಲ್ಲಿ ಕಾವಲು ನಿಂತಿದ್ದರು ಜೊತೆಗೆ ದಂಡೆಗುಂಟಾ ಮಣ್ಣಿನಗೋಡೆಯನ್ನು ನಿರ್ಮಿಸಿ ಅದರ ಮೇಲೆ ತೋಪುಗಳನ್ನು ಇಟ್ಟಿದ್ದರೆಂದು ಸಮಕಾಲೀನದ ಬಹುತೇಕ ಇತಿಹಾಸಕಾರರು ಹೇಳಿದ್ದಾರೆ ಇದಷ್ಟು ಮೊದಲ ಘಟ್ಟ..[೫]

**ಎರಡನೆಯ ಹಂತ**

ವಿಜಯನಗರದ ಹಾಗೂ ಒಕ್ಕೂಟ ಸೈನ್ಯಗಳು ಹೀಗೆ ಕೃಷ್ಣೆಯ ದಕ್ಷಿಣ (ಬಲ) ಹಾಗೂ ಉತ್ತರ(ಎಡ)ಬದಿಗಳಲ್ಲಿ ಬೀಡಾರ ಬಿಟ್ಟರು. ಯುದ್ಧ ಪ್ರಾರಂಭಿಸಲು ಉಭಯತರಲ್ಲಿ ಒಬ್ಬರು ಹೊಳೆಯನ್ನು ದಾಟಿ ಬರಬೇಕು. ವಿಜಯನಗರದ ಸೈನ್ಯಕ್ಕೆ ಆ ಗರಜು ಇರಲಲ್ಲಿ ಅವರು ಹೊಳೆಯ ದಂಡೆಯಲ್ಲಿ ಶತ್ರುವು ಹೊಳಿದಾಟಿ ಬರದಂತೆ ಬಲವಾದ ಪಡೆಯೊಂದಿಗೆ ಕಾಯುತ್ತಿದ್ದರು ಯುದ್ಧಕ್ಕೆ ಸನ್ನದ್ಧರಾಗಿ ಬಂದವರು ಮುಸ್ಲಿಂ ಸೈನ್ಯ ಹೇಗಾದರೂ ಮಾಡಿ ಹೊಳೆ ದಾಟಬೇಕು ಕಾಲ್ಗೊಳಿ ಅಥವಾ ಹಾಯ್ಗಡ ಇದ್ದದ್ದು ಇಂಗಳಗಿಯ ಹತ್ತಿರ ಇಂಗಳಗಿಯ ಹತ್ತಿರ ಹೊಳೆಯನ್ನು

ದಾಟಬಂದರೆ ತೊಂಡಿಹಾಳ ಗ್ರಾಮ ಬರುತ್ತದೆ ಅಲ್ಲಿ ವಿಜಯನಗರದ ಬಲವಾದ ಪಡೆ ಇತ್ತು ಫಿರಿಸ್ತಾವನ್ನು ಆಧರಿಸಿ ಝುಬೇರಿ ಬರೆದ "ಬುಸಾತಿನೆ ಸಲಾತಿನ" ಇದನ್ನು ಸ್ಪಷ್ಟಗೊಳಿಸುತ್ತದೆ.

"ಮುಸಲ್ಮಾನ ಸೈನ್ಯವು ಕೃಷ್ಣಾತೀರಕ್ಕೆ ಬಂದು ನದಿಯನ್ನು ದಾಟಿ ಹೋಗುವ ಮಾರ್ಗವು ಮುಚ್ಚಿದೆಎಂದು ಗೊತ್ತಾದಾಗ ಈಜು ಬರುವ ದಾರಿ ಕರೆದು ಬೇರಡೆಯಲ್ಲಿ ಮಾರ್ಗವನ್ನು ಹುಡುಕಲು ಕಳಿಸಲಾಯಿತು ಮತ್ತು ಅವರು ಮೂವತ್ತು ನಲ್ವತ್ತು ಕೋಸುಗಳವರೆಗೆ ನಾಲ್ಕು ಕಡೆಗೆ ಹೋಗಿ, ನೀರಿನ ಆಳವನ್ನು ವಿಚಾರಿಸಿ ಬಂದರು ಎರಡು ಮೂರು ಸ್ಥಳಗಳಲ್ಲಿ ಸೈನ್ಯ, ಕುದುರೆ, ಆನೆಗಳು ಸಾಗಿಸಲು ಮಾರ್ಗವಿದೆಯೆಂದು ಗೊತ್ತಾದರೂ ಅಲ್ಲಿಯೂ ರಾಮರಾಯನ ಸೈನ್ಯವು ನಿಂತಿದೆ ಎಂದು ತಿಳಿಯಿತು ಮಾರ್ಗಬದಲಿಸಿ ಬೇಕೆಂದು ಮಾರ್ಗದಿಂದ ನದಿಯನ್ನು ಇಳಿದು ಶತ್ರುಗಳು ಇತ್ತ ಬರುತ್ತಿದ್ದಾರೆಂಬ ವದಂತಿಯನ್ನು ರಾಮರಾಯನ ಸೈನ್ಯದಲ್ಲಿ ಪಸರಿಸಿದರು".

ಇದನ್ನೇ ಬಹುತೇಕ ಎಲ್ಲ ಇತಿಹಾಸಕಾರರೂ ಉಲ್ಲೇಖಿಸುತ್ತ ಈ ಸಂದರ್ಭದಲ್ಲಿ ವಿಜಯನಗರ ಸೈನ್ಯವು ತನ್ನ ಠಾಣೆಯನ್ನು ಬದಲಾಯಿಸಿದಾಗ ಒಂದೇ ರಾತ್ರಿಯಲ್ಲಿ ಶತ್ರು ಸೈನ್ಯವು ನದಿಯನ್ನು ದಾಟಿತು ಎಂದು ಹೇಳಲಾಗುತ್ತದೆ. ಇಲ್ಲಿ ಒಂದು ಕ್ಷಣ ಸಂಭಾವ್ಯತೆಗಳನ್ನು ಪರಿಶೀಲಿಸಬೇಕು. ಕೃಷ್ಣಾನದಿಯ ಉಭಯ ದಡಗಳಲ್ಲಿ ಸೈನ್ಯಗಳದ್ದ ಪ್ರದೇಶದಲ್ಲಿ ೩–೪ ಕಡೆಗೆ ಹಾಯ್ಲುಡಗಳು ಇವೆಯೆಂದು ಮುಸ್ಲಿಮ ಬೇಹುಗಾರರು ಹೇಳಿದ್ದು ನಿಜ. ವಾಸ್ತವದಲ್ಲಿ ಇಂದಿಗೂ ಅದೇ ರೀತಿಯಾಗಿದೆ ಅವುಗಳಲ್ಲಿ ಪೂರ್ವಕ್ಕೆ ಇಂಗಳಗಿ – ತೊಂಡಿಹಾಳವಾಗಿದ್ದರೆ ಪಶ್ಚಿಮಕ್ಕೆ ಬಳಪಟ್ಟಿಯಲ್ಲಿ ಮಧ್ಯ ಧನ್ನೂರಿನ ಹತ್ತಿರವೂ ಕಾಲ್ಹೊಳೆಯಾಗಿರುತ್ತದೆ. ಮೊದಲ ಹಂತದಲ್ಲಿ ಕಾಣಿಸಿದಂತೆ ಇಂಗಳಗಿ ದಿಶೆಯಲ್ಲಿ ಉತ್ತರಕ್ಕೆ ಗೋಲ್ಕಂಡದ ಕುತುಬಶಾಹ ಹಾಗೂ ಬೀದರದ ಬರೀದಶಾಹನ ಸೈನ್ಯ ಇತ್ತು ವಿಜಯನಗರದವರನ್ನು ಮೋಸಮಾಡಲು ಇಂಗಳಗಿಯ ಹತ್ತಿರ ಬಂದು ಪಶ್ಚಿಮಾಭಿಮುಖವಾಗಿ ಸೈನ್ಯದ ಚಲನವಲನವನ್ನು ತೋರಿಸಿದರೂ ೧೦–೧೫ ಕಿ.ಮೀ ಬರವಷ್ಟರಲ್ಲಿ ವಿಜಯನಗರದ ತೊಂಡಿಹಾಳದ ಹತ್ತಿರ ಇಂಗಳಗಿಗೆ ಎದುರಿನ ದಂಡೆಯದ ಸೈನ್ಯ ಚಲಿಸಿತು ಎಂದಿಟ್ಟುಕೊಂಡರೂ ಆ ಕಾಲಹೊಳೆಯಲ್ಲಿ ಒಕ್ಕೂಟದ ಎಲ್ಲ ಸೈನ್ಯದ ಒಂದು ರಾತ್ರಿಯಲ್ಲಿ ದಾಟಲು ಸಾಧ್ಯವೆ ಇಲ್ಲ ಆದ್ದರಿಂದ ಕುತುಬಶಾಹ ಮತ್ತು ಬರೀದಶಾಹನ ಕೆಲವೊಂದು ಸೈನ್ಯ ದಾಟಿರಲೂಬಹುದು ಅವರು ದಾಟಿದ್ದರೆಂದು.[೬] ಇದನ್ನೆ ಬಹುತೇಕ ಎಲ್ಲ ಇತಿಹಾಸಕಾರರೂ ಉಲ್ಲೇಖಿಸುತ್ತ ಈ ಸಂದರ್ಭದಲ್ಲಿ ವಿಜಯನಗರದ ಸೈನ್ಯ ತನ್ನ ಠಾಣೆಯನ್ನು ಬದಲಾಯಿಸಿದಾಗ ಒಂದೇ ರಾತ್ರಿಯಲ್ಲಿ ಶತ್ರು ಸೈನ್ಯವು ನದಿಯನ್ನು ದಾಟಿತು ಎಂದು ಹೇಳಲಾಗುತ್ತದೆ ಇಲ್ಲಿ ಒಂದು ಕ್ಷಣ ಸಂಭಾವ್ಯತೆಗಳನ್ನು ಪರಿಶೀಲಿಸಬೇಕು ಕೃಷ್ಣಾನದಿಯ ಉಭಯ ದಡಗಳಲ್ಲಿ ಸೈನ್ಯಗಳಿದ್ದ ಪ್ರದೇಶದಲ್ಲಿ ೩–೪ ಕಡೆಗೆ ಹಾಯ್ಲುಡಗಳು ಇವೆಯೆಂದು ಮುಸ್ಲಿಮ ಬೇಹಗಾರರು ಹೇಳಿದ್ದು ನಿಜ ವಾಸ್ತವದಲ್ಲಿ ಇಂದಿಗೂ ಅದೇ ರೀತಿಯಾಗಿದೆ ಅವುಗಳಲ್ಲಿ ಪೂರ್ವಕ್ಕೆ ಇಂಗಳಗಿ

ತೊಂಡಿಹಾಳವಾಗಿದ್ದರೆ ಪಶ್ಚಿಮಕ್ಕೆ ಬಳಬಟ್ಟೆಯಲ್ಲಿ ಮಧ್ಯ ಧನ್ನೂರಿನ ಹತ್ತಿರವೂ ಕಾಲ್ಹೊಳೆಯಾಗಿರುತ್ತದೆ ಮೊದಲ ಹಂತದಲ್ಲಿ ಕಾಣಿಸಿದಂತೆ ಇಂಗಳಗಿ ದಿಶೆಯಲ್ಲಿ ಉತ್ತರಕ್ಕೆ ಗೋಲ್ಕಂಡದ ಕುತುಬಶಾಹ ಹಾಗೂ ಬೀದರದ ಬರೀದಶಾಹನ ಸೈನ್ಯ ಇತ್ತು ವಿಜಯನಗರದವರನ್ನು ಮೋಸಮಾಡಲು ಇಂಗಳಗಿಯ ಹತ್ತಿರ ಬಂದು ಪಶ್ಚಿಮಾಭಿಮುಖವಾಗಿ ಸೈನ್ಯದ ಚಲವಲನವನ್ನು ತೋರಿಸಿದರೂ ೧೦–೧೫ ಕಿ.ಮೀ ಬರುವಷ್ಟರಲ್ಲಿ ವಿಜಯನಗರದ ತೊಂಡಿಹಾಳದ ಹತ್ತಿರ (ಇಂಗಳಗಿ ಎದುರಿನ ದಂಡೆಯ)ದ ಸೈನ್ಯ ಚಲಿಸಿತು ಎಂದಿಟ್ಟುಕೊಂಡರೂ ಆ ಕಾಲು ಹೊಳೆಯಲ್ಲಿ ಒಕ್ಕೂಟದ ಎಲ್ಲ ಸೈನ್ಯವು ಬಂದು ರಾತ್ರಿಯಲ್ಲಿ ದಾಟಲು ಸಾಧ್ಯವೇ ಇಲ್ಲ. ಆದ್ದರಿಂದ ಕುತುಬಶಾಹ ಮತ್ತು ಬರೀದಶಾಹನ ಕೆಲವೊಂದು ಸೈನ್ಯ ದಾಟಿರಲೂಬಹುದು ಅವರು ದಾಟಿದ್ದಾರೆಂದು ಗೊತ್ತಾಗುತ್ತಿದ್ದಂತೆ ವಿಜಯನಗದರ ಸೈನ್ಯ ಹಿಂತಿರುಗಿತಲ್ಲದೆ ತೊಂಡಿಹಾಳದ ಹಿನ್ನಲೆಯಲ್ಲಿ ಸಾಕಷ್ಟು ಸೈನ್ಯವಿತ್ತು. ಅದು ಮುಸ್ಲಿಂ ಸೈನ್ಯವನ್ನು ಎದುರಿಸಿದೆ. ಆದರೆ ಅದೊಂದು ಬಹುದೊಡ್ಡ ಯುದ್ಧವೇನೂ ಆಗಿರಲಿಲ್ಲ ಆದರೆ ಶತ್ರುಗಳಿಗೆ ಬಲವಾದ ಪೆಟ್ಟು ಬಿದ್ಧಿತ್ತು ಎನ್ನಲು ಝುಬೇರಿಯ ಈ ವಿವರಣೆ ಸಾಕ್ಷಿಯಾಗಿದೆ.



ರಾಮರಾಯನ ಕಡೆಯ ಸೈನ್ಯದ ದಾಳಿಯಿಂದ ಮುಸಲ್ಮಾನ ಜನರ ಎಡಗಡೆಯಲ್ಲಿ ನಿಂತ ಕುತುಬಶಾಹ ಹಾಗೂ ಅಲ್ಲ ಬರೀದರ ಸೈನ್ಯವು ಉದ್ವಸ್ತವಾಯಿತು.

"ರಾಮರಾಜನ ಕಡೆಯ ಸೈನ್ಯದ ದಾಳಿಯಿಂದ ಮುಸಲ್ಮಾನ ಜನರ ಎಡಗಡೆಯಲ್ಲಿ ನಿಂತ ಕುತುಬಶಾಹ ಹಾಗೂ ಅಲ್ಲಿ ಬರೀದರ ಸೈನ್ಯವು ಉಧ್ವಸ್ತವಾಯಿತು.

ನಿಜಾಮಶಾಹನ ಸೈನ್ಯದಲ್ಲಿ ಬಿರುಕು ಬಿಟ್ಟಿತು ಯುದ್ಧಾರಂಭದಲ್ಲಿ ಕುತುಬಶಾಹನ ಹಾಗೂ ಅಲ್ಲಿ ಬರೀದರು ಹಿಡಿದ ಸ್ಥಳವನ್ನು ಬಿಟ್ಟರು ನಿಜಾಮಶಾಹನು ನೋಡಿ ಮರಣ ಸಿದ್ಧರಾಗಿಯೆ ಬಂದು ಸ್ಥಿರವಾಗಿ ನಿಂತ ಮುಸಲ್ಮಾನರ ಸೈನ್ಯಕ್ಕೆ ದೃಷ್ಟಿ ತಾಗುವುದೆಂದು ಸ್ಥಳ ಬದಲಾಯಿಸಿದನು. ಆ ಸ್ಥಳವನ್ನು ಬಿಟ್ಟು ಹೊರಟನು".

ಮುಸಲ್ಮಾನರ ಸೈನ್ಯವು ಹೊಳೆಯನ್ನು ದಾಟಿ ಬಂದಿದ್ದರೂ ಅದನ್ನು ಹಿಂತಿರುಗಿಸುವಲ್ಲಿ ವಿಜಯನಗರ ಸೈನ್ಯ ಯಶಸ್ವಿಯಾಗಿದೆ ಎಂದು ಇದು ಸ್ಥಿರಪಡಿಸುತ್ತದೆ. ಆದರೆ ಈ ಘಟನೆಯನ್ನು ನಿರ್ಣಾಯಕ ಕಾಳಗವೆಂದು ತಿಳಿದು ವಿದ್ವಾಂಸರುಗಳೆಲ್ಲ ಇಂಗಳಗಿಯಲ್ಲಿ ಹೊಳೆಯನ್ನು ದಾಟಿ ತೊಂಡಿಹಾಳಕ್ಕೆ ಬಂದು ಮುಂದುವರೆದು ಬಯ್ಯಾಪುರು ಭೋಗಾಪುರದಲ್ಲಿ ಯುದ್ದ ನಿರತರಾಗಿ ಇನ್ನೂ ಮುಂದೆ ಎಂದು ಬನ್ನಿಹಟ್ಟಿಯಲ್ಲಿ ನೀಣಾಯಕ ಕಾಳಗವಾಗಿ ಅಲ್ಲಿಯೆ ರಾಮರಾಯ ಸೆರೆಸಿಕ್ಕು ಸತ್ತನೇಂದು ಕಳೆದ ಒಂದುನೂರು ವರುಷಗಳ ಕಾಲದ ಪಾಶ್ವತ್ಯ ಹಾಗೂ ಭಾರತಿಯ ಇತಿಹಾಸಕರರೆಲ್ಲ ಹರಸಾಹಸ ಮಾಡಿದ್ದಾರೆ

ಇಲ್ಲಿ ಒಂದು ಕ್ಷಣ ವಿಜಯನಗರ ಸೈನ್ಯದ ವಿವರ ಅಗತ್ಯವಾಗುತ್ತದೆ ಬಹುತೇಕ ಉಲ್ಲೇಕಗಳು ಹೇಳುವಂತೆ ವಿಜಯನಗರ ದಂಡು ಬರುವಾಗ ಬಲಭಾಗದಲ್ಲಿ ವೆಂಕಟಾದ್ರೀಯ ಸೈನ್ಯ ಎಡಬಾಗದಲ್ಲಿ ತಿರುಮಲನ ಸೈನ್ಯ ಮಧ್ಯದಲ್ಲಿ ಸ್ವತಃ ರಾಮರಾಯನ ಸೈನ್ಯವಿತ್ತು. ಇಲ್ಲಿ ಬಲಭಾಗದಲ್ಲಿ ಬರುವ ವೆಂಕಟಾದ್ರೀಯ ಸೈನ್ಯವೇ ಹೊಳೆದಾಟಿ ಬಂದ ಕುತುಬಶಾಹಿ ಬರೀದಶಾಹಿ ದಂಡನ್ನು ಎದುರಿಸದೆ. ರಾಮರಾಯ ತಿರುಮಲರ ಸೈನ್ಯವಾಗಲೀ ಅವರಾಗಲೀ ಯುದ್ಧದಲ್ಲಿ ಭಾಗಿಯಾಗಿಲ್ಲ ಅದರಂತೆ ಮುಸ್ಲಿಮರ ಸೈನ್ಯದಲಿ ನಿಜಾಮಶಾಹ ಆದಿಲಶಾಹರೂ ಭಗಿಯಾಗಿಲ್ಲವೆಂಬುದನ್ನು ಈ ಹಿಂದೆಯೇ ನೋಡಿಯಾಗಿದೆ.

ರಾಬರ್ಟ್ ಸಿವೆಲ್ ಕೂಡ"ಮಿತ್ರ ಸೈನ್ಯಗಳು ಬಹುಶಃ ಬಹಳ ಕಾಲ ತಂಗಿದ್ದವು ಎಂದು ಹೇಳುತ್ತಾನೆ ಅಂದರೆ ಯುದ್ಧದಲ್ಲಿ ನಿರತರಾಗಿರಲಿಲ್ಲವೆಂದೇ ಅರ್ಥವಾಗುತ್ತದೆ ಕನ್ನಡ ಮತ್ತು ಮರಾಠಿ ಬಖರಗಳು ನಾಲ್ವರು ಶಾಹಿಗಳಲ್ಲಿ ಇಬ್ಬರು ಶಾಹಿಗಳು ತಟಸ್ಥರಾಗಿದ್ದರು ಎಂದೆ ಹೇಳುತ್ತವೆ.

"ನಿಜಾಂಶಾಹ ಪಾದುಷಹನಾ ಕುತುಬಷಾಹ ಪಾದುಷಹನೂ ತಮ್ಮ ಸೈನಿಕರು ಬಹಳ ಚೆನ್ನಾಗಿ ಯುದ್ಧ ಮಾಡಿದರೆಂದು ಬಹು ಸಂತೋಷದಿಂದ ಇದ್ದರು ಅಲಿ ಆದಿಲಷಹ ಪಾದುಷಹ ಕನ್ನಡ ಜಾಣನೂ ವಾಹಿಮ್ ಉಲ್ಕ-ಮುಲ್ಕ ಪಾದುಷಹನೂ ತಮ್ಮ ತಮ್ಮ ಸೈನ್ಯಗಳೊಡನೆ ತಾವು ತಂಗಿದ್ಧ ಸ್ಥಳದಲ್ಲಿಏ ಇದ್ದರು. ಯುದ್ಧಕ್ಕೆ ಹೊಗಲಿಲ್ಲ.

ಡಾ.ರಾಧೇಶ್ಯಾಮರು ತಮ್ಮ "ನಿಜಾಮಷಾಹೀ" ಪ್ರಬಂಧದಲ್ಲಿ ಹೇಳುತ್ತ "Thirty three days passed in negotiations with Ramraj for settlement and in minor skirmished between the advance guard of the rival armies" ಎಂದೇ ಹೇಳುತ್ತಾರೆ ೩೩ ದಿನಗಳ ಕಾಲ ರಾಮರಾಜನೊಂದಿಗೆ ಮಾತುಕತೆಯಲ್ಲಿ ಹೋಧಾಗ ಉಭಯ ಬಣಗಳ ಮುಂಚೂಣಿಯ ಸೈನಿಕರ ಪರಸ್ಪರ ಚಿಕ್ಕಪುಟ್ಟ ಒಂದಾಟ ಬಿಟ್ಟರೆ ಯುದ್ಧವೇ ಆಗಿರಲಿಲ್ಲ ನಿರ್ಣಾಯಕ ಯುದ್ಧವಾದದ್ದು ದಿನಾಂಕ ೨೩-೦೧-೧೫೬೫ ರಂದು.

**ಮೂರನೇಯ ಹಂತ**

ಇತ್ತಲಾಗಿ ರಾಜಭೂವರರು ಸಕಲ ಸಮೇತವಾಗಿ ರಾಕ್ಷಸ ತಂಗಡಿ ಬಳಿಯ ಮೈದಾನದಲ್ಲಿ ಇಳಿದು ಅಲ್ಲಿ ರಣಗಂಟೆಗಳನ್ನು ಹೊಡಿಸಿ ರಣಸ್ತಂಭವನ್ನು ಕಟ್ಟಿಸಿದನು ರಣಸ್ತಂಭದ ಬಳಿ ಸೈನ್ಯವ್ಯೂಹಗಳು ಸಿದ್ಧವಾದವು ಶತ್ರುಸೈನ್ಯವೂ ಬಂತು ಸಮಸ್ತರೂ ತಾಳಿಕೋಟಿ ನಾಲ್ವತ್ತುವಾಡೆಗಳ ಮಧ್ಯದಲ್ಲಿ ಇಳಿದರು.

ರಾಮರಾಯ ಮತ್ತು ಆತನ ಸೈನ್ಯವು ಕೃಷ್ಣಾನದಿಯನ್ನು ದಾಟಿ ತಂಗಡಗಿಯ ಹತ್ತಿರ ಬಂದದ್ದು ಇದರಿಂದ ಖಚಿತವಾಗುತ್ತದೆ ಬಖರಕಾನಿಗೂ ಇಲ್ಲಿಂರು ಗ್ರಾಮಗಳ ಸರಿಯಾದ

ಹೆಸರುಗಳು ಗೊತ್ತಿರಲಿಲ್ಲವೆಂದು ಕಾಣುತ್ತದೆ. ಆತ ಹೇಳುವ "ರಾಕ್ಷಸ ತಂಗಡಿ" ಎಂಬುದು ರಕ್ಕಸಗಿ – ತಂಗಡಗಿ ಎಂಬ ಎರಡು ಗ್ರಾಮಗಳು ಹೆಸರುಗಳಾಗಿವೆ ಕೃಷ್ಣಾನದಿಯ ಎಡದಂಡೆಯಲ್ಲಿ ಇರುವ ಎರಡು ಗ್ರಾಮಗಳ ಮಧ್ಯದ ಅಂತರ ಸುಮಾರು ೧೧ ಮೈಲು ಅಥವಾ ೧೬ ಕಿಲೋಮೀಟರು ಆದೀತು ರಾಮರಾಯನು ಹೊಳೆಯನ್ನು ದಾಟಿದ್ದು ಬಳಬಟ್ಟಿ ಮತ್ತು ತಂಗಡಗಿಯ ಹತ್ತಿರ ಸಾಧ್ಯತೆ ಇದೆ. ಅವುಗಳಿಗೆ ಎದುರಾಗಿ ಬಲದಂಡೆಯಲ್ಲಿ ಬೊಮ್ಮಣಗಿ ಮತ್ತು ಧನ್ನೂರು ಗ್ರಾಮಗಳಿವೆ. ಇಲ್ಲಿ ಹಾಯ್ಲುಡೆಗಳಿದ್ದ ದಾಖಲೆಗಳೂ ಇವೆ ಇಂದು ಧನ್ನೂರು ಮತ್ತು ತಂಗಡಗಿಗಳ ಮಧ್ಯ ದೊಡ್ಡ ಸೇತುವೆಯೇ ಇದೆ ನೆರವಾಗಿ ತಂಗಡಗಿಗೆ ಬಂದು ಎಡ ಬಲದ ಬಯಲುಗಳಲ್ಲಿ ವಿಜಯನಗರ ಸೈನ್ಯ ಬೀಡಾರ ಹೂಡಿರಲು ಸಾಕು ಅದರಂತೆಯೇ ಒಂದಿಷ್ಟು ಸೈನ್ಯ ಬಹುಶಃ ತಿರುಮಲನ ನೇತೃತ್ವದ ಸೈನ್ಯ ಬೊಮ್ಮಣಗಿಯಿಂದ ಹೊಳೆಯನ್ನು ದಾಟಿ ಬಳಬಟ್ಟಿಗೆ ಬಂದು ಬಲಗಡೆಯಲ್ಲಿ ಸುಮಾರು ಹತ್ತು ಕಿಲೋಮೀಟರುಗಳು ಅಂತರ ಕ್ರಮಿಸಿ ತಂಗಡಿಗೆ ಬಂದು ರಾಮರಾಯನನ್ನು ಕೂಡಿಕೊಂಡಿರಬೇಕು. ಬಳಬಟ್ಟಿಯಿಂದ ತಂಗಡ ಗಿಗೆ ಬರುವ ದಾರಿಯನ್ನು "ರಾಯನ ದಂಡಿನ ದಾರಿ" ಎಂದು ಇಂದಿಗೂ ಕರಿಯುತ್ತರೆ. ಸ್ಥಳೀಯವಾಗಿ ಅದಕ್ಕೆ ದಂಡಿನ ದಾರಿ ಎಂದು ಹೆಸರು ಅದರಂತೆ ತಾಳಿಕೋಟೆ –ನಾಲ್ವತ್ತುವಾಡಗಳಿಂದ ರಕ್ಕಸಗಿಗೆ ಬರುವ ದಾರಿಯನ್ನು "ಪಾಶಾನ ದಂಡಿನ ದಾರಿ ಎಂದೇ ಸ್ಥಳಿಯರೂ ಇಂದಿಗೂ ಕರೆಯುತ್ತಾರೆ.

ಇದೀಗ ರಾಮರಾಯನು ಸೈನ್ಯ ತಂಗಡಗಿಯ ಬಯಲಿನಲ್ಲೂ ಮುಸ್ಲಿಮರ ಸೈನ್ಯ ನಾಲ್ವತ್ತುವಾಡ ರಕ್ಕಸಗಿ ಮಧ್ಯದಲ್ಲೂ ಬಂದು ಎದುರು  ಬದುರು ನಿಂತುವು. ಇನ್ನು ರಾಮರಾಯನು ಕಟ್ಟಿಸಿದ್ದ ರಣಸ್ತಂಭಗಳನ್ನು ಹುಡುಕಬೇಕು.

ಕ್ರಿ.ಶ. ೧೯೨೮ ರಲ್ಲಿ ಕರ್ನಾಟಕದ ಹಿರಿಯ ಸಂಶೋಧಕರಾದ ನಾ.ಶ್ರೀ ರಾಜ ಪುರೋಹಿತರು ರಾಮರಾಯನ ಬಖೈರು ಹಿಡಿದು ಕೊಂಡು ಆತ ಹೇಳಿದ ಸ್ಥಳಗಳನ್ನೆಲ್ಲ ಪ್ರತ್ಯಕ್ಷ ಕಂಡು ವರಿದಿ ಮಾಡಿದ್ದಾರೆ ಅದು ದಿನಾಂಕ ೨೩–೧೨–೧೯೨೮ ರ ಕರ್ನಾಟಕ ಧುರೀಣ" ಎಂಬ ಅಂದಿನ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅದೊಂದು ಸುದೀರ್ಘ ವರದಿ ಅದರಲ್ಲಿ ರಣಸ್ತಂಭ ಕುರಿತು ಹೀಗೆ ವರದಿ ಮಾಡಿದ್ದಾರೆ.

"ಈ ಊರು (ತಂಗಡಗಿ) ಪೂರ್ವದಿಕ್ಕಿನ ಮೈದಾನದಲ್ಲಿ ಅಂದರೆ ನಾಲವತವಾಡ ಗ್ರಾಮದ ದಿಕ್ಕಿನ ಮೈದಾನದಲ್ಲಿ ರಣಸ್ತಂಭಗಳನ್ನು ಶೋಧೀಸಬೇಕೆಂದು ಈ ಊರು ಕುಲಕರ್ಣಿ ಮಹಿಪತಿಯರನ್ನು ಕರೆದುಕೊಂಡು ನಾಲವತಕಡೆಗೆ ಶೋಧ ಮಾಡುತ್ತಿರಲು ೩ಮೈಲುಗಳು ಮೇಲೆ ಉತ್ತರಕ್ಕೊಂದು, ಪೂರ್ವಕ್ಕೊಂದು ರಣಸ್ತಂಭಗಳು ದೃಷ್ಟಿಗೋಚರವಾದವು ರಣಸ್ತಂಭ ನಿಲ್ಲಿಸಿದ್ದರ ಬಗೆಗೆ ಫಿರಿಸ್ತಾ ಝುಬೇರಿ ಮತ್ತು ರಾಬರ್ಟ್‌ಸಿವೆಲ್ ಕೂಡ ಹೇಳುತ್ತಾರೆ. ಅದರೆ ಸ್ಥಳನಿರ್ದೇಶನವನ್ನು ಮಾಡಿಲ್ಲ.

ಈ ವರೆಗೆ ಚರ್ಚಿಸಿದ ಪ್ರದೇಶಗಳಲ್ಲಿ ನಾಲ್ವತ್ತುವಾಡ ಮತ್ತು ತಂಗಡಗಿ ಮಧ್ಯ ಮಾತ್ರ ರಣಸ್ತಂಭಗಳು ದೊರೆತಿವೆ ಆದ್ದರಿಂದ ನಿರ್ಣಾಯಕ ಕಾಳಗವು ತಂಗಡಗಿ ಮತ್ತು ನಾಲ್ವತ್ತುವಾಡಗಳ ಮಧ್ಯ ದಿನಾಂಕ ೨೩-೦೧-೧೫೬೫ ರಂದು ಆಯಿತ್ತು. ಅದು ಕೆಲವು ಗಂಟೆಗಳ ಕಾಲ ಮಾತ್ರ ಜರುಗಿತು. ಆಗ ಆಕಸ್ಮಿಕವಾಗಿ ರಾಮರಾಯನು ನಿಜಾಮ ಶಾಹನ ದಳಪತಿಗಳಲ್ಲೊಬ್ಬನ್ನಾದ ರೂಮಖಾನನ ಕೈಗೆ ಸಿಕ್ಕು ನಿಜಾಮ ಶಾಹನಿಂದ ಕೊಲೆಯಾದ ಆತನ ರುಂಡವನ್ನು ಭಲ್ಲೆಯ ತುದಿಗೆ ಸಿಕ್ಕಿಸಿ ಮೆರವಣಿಗೆ ಮಾಡಿದಾಗ ವಿಜಯನಗರ ಸೈನ್ಯ ಓಡಿಹೋಯಿತು. ಅಂತೆಯೇ ಇಂದಿಗೂ ಸ್ಥಳೀಯರಲ್ಲಿ ದೊಡ್ಡ ಬಡಿದಾಟಗಳಾದಾಗ "ಯಾಕ ರಾಯನ ಚಂಡನ್ನು ಮೆರಿಸಿದ್ದಾಂಗ ಮೆರಸಲೇನು? ಎಂದು ಕೇಳುವಂತೆ ರಾಮರಾಯನ ಸಾವು ಒಂದು ಪಡೆನುಡಿಯಾಗಿ ಆತನ ರುಂಡವನ್ನು ಮೆರೆಸಿದ್ದನ್ನು ಜೀವಂತವಾಗಿಟ್ಟಿದೆ.[೭]

**೧. ತಾಳಿಕೋಟೆ ಯುದ್ದ ನಡೆದ ಸಂಭಾವ್ಯಸ್ಥಳಗಳು**

| | | | |
|---|---|---|---|
| ಆದಿಲಶಾಹ ಸೈನ್ಯ | ನಿಜಾಮಶಾಹ ಸೈನ್ಯ | ಬರೀದಶಾಹ ಸೈನ್ಯ | ಕುತುಬ್‌ಶಾಹ ಸೈನ್ಯ |
| **ನಾಲ್ವತ್ತವಾಡ** | | | |
| ಬಳಬಟ್ಟೆ | ಸಂಗಡಗಿ | ಇಂಗಳಗಿ | ರಕ್ಕಸಗಿ |
| ಕೃಷ್ಣಾನದಿ | | | |
| ಬೊಮ್ಮಣಗಿ | ಧನ್ನೂರ | ತೊಂಡೀಹಾಳ | |
| ತಿರುಮಲನ ಸೈನ್ಯ | ರಾಮರಾಯನ ಸೈನ್ಯ | ವೆಂಕಟ ಸೈನ್ಯ | |
| ವಿಜಯನಗರ ಸೈನ್ಯ | | | |
| ಕುಷ್ಟಗಿ | ತಾವರಗೇರಿ [೮] | | |

**೨. ತಾಳಿಕೋಟೆ**

| | | | |
|---|---|---|---|
| ಆದಿಲಶಾಹ | ನಿಜಾಮಶಾಹ | ಬರೀದ | ಕುತುಬ್‌ಶಾಹ |
| **ನಾಲ್ವತ್ತವಾಡ** | | | |
| ಬಳಬಟ್ಟೆ | ತಂಗಡಗಿ | ಇಂಗಳಗಿ | ರಕ್ಕಸಗಿ |
| ಕೃಷ್ಣಾನದಿ | | | ಕೃಷ್ಣಾನದಿ |
| ತಿರುಮಲ | ರಾಮರಾಯ | | ತೊಂಡಿಹಾಳ |
| | | | ಬಯ್ಯಾಪುರ |
| | ವೆಂಕಟಸೈನ್ಯ | | ಭೋಗಾಪುರ |
| | | | ಬನ್ನಿಹಟ್ಟಿ [೯] |
| ವಿಜಯನಗರ ಸೈನ್ಯ | | | |

**೩. ತಾಳಿಕೋಟೆ**

| | | | |
|---|---|---|---|
| **ನಾಲ್ವತ್ತವಾಡ** | | | |
| ಆದಿಲಶಾಹಿ ಸೈನ್ಯ | ನಿಜಾಮ ಸೈನ್ಯ | ಪಾಶಾನ ದಂಡಿನ ದಾರಿ | ಬರೀದ |
| | | | ಕುತುಬ |
| | ರಣಸ್ತಂಭ | | |
| | ರಾಮರಾಯ ಸೆರೆಸಿಕ್ಕ ಸ್ಥಳ | | |
| | ರಾಮರಾಯನ ಸೈನ್ಯ | | |
| | ರಾಯನ ದಂಡಿನ ದಾರಿ | | |
| ಬಳಬಟ್ಟೆ | ತಂಗಡಗಿ | ರಕ್ಕಸಗಿ | |
| ಕೃಷ್ಣಾನದಿ | | ಕೃಷ್ಣಾನದಿ | |
| ಬೊಮ್ಮಣಗಿ | | ಧನ್ನೂರು | |
| ತಿರುಮಲನ ಸೈನ್ಯ | ರಾಮರಾಯನ ಸೈನ್ಯ | ವೆಂಕಟನಸೈನ್ಯ [೧೦] | |

## ೩.೩. ರಕ್ಕಸಗಿ–ತಂಗಡಗಿ ಯುದ್ಧದ ಪರಿಣಾಮಗಳು

ತಾಳಿಕೋಟೆ ಯುದ್ಧ ಅಥವಾ ರಕ್ಕಸ ತಂಗಡಿ ಯುದ್ಧದಿಂದ ಹಲವಾರು ಮಹತ್ವದ ಪರಿಣಾಮಗಳಿಂಟಾದವು.ಈ ಯುದ್ಧ ದಕ್ಷಿಣ ಭಾರತದ ಮತ್ತು ಬಾರತೀಯ ಇತಿಹಾಸದ ನಿರ್ಣಾಯಕ ಯುದ್ಧಗಳಲ್ಲಿ ಒಂದು ಮೂರು ಶತಮಾನಗಳ ಕಾಲ ಹಿಂದೂ ಧರ್ಮ ಮತ್ತು ಸಂಸ್ಕೃತಿಗೆ ಭದ್ರತೆ ಮತ್ತು ರಕ್ಷಣೆಗಳನ್ನು ನೀಡಿದ್ದ ವಿಜಯನಗರದ ಸಾಮ್ರಾಜ್ಯ ನುಚ್ಚುನೂರಾಯಿತು.ದಕ್ಷಿಣ ಭಾರತದಲ್ಲಿ ಮತ್ತೊಮ್ಮೆ ಅನೈಕ್ಯತೆ.ಅಭದ್ರತೆ.ಮತ್ತು ಅವ್ಯವಸ್ಥೆಗಳು ತಲೆದೇರಿದವು.ಅನಾಯಕತ್ವ ಮತ್ತು ಅರಾಜಕತೆ ಎಲ್ಲೆಡೆ ನೆಲೆಸಿದವು. ಹಿಂದೂ ಸಂಸ್ಕೃತಿ ಮತ್ತು ಧರ್ಮಗಳಗೆ ಗರ ಹೊಡೆಯಿತು. ಈ ಯುದ್ಧದಿಂದಾಗಿ ವಿಜಯನಗರ ಸಾಮ್ರಾಜ್ಯ ಪ್ರಾಬಲ್ಯ ಮತ್ತು ವೈಭವಗಳು ಸಂಪೂರ್ಣವಾಗಿ ಹಾಳಾದವು. ಮುಸ್ಲಿಯ ಪ್ರಬಲರಾಗಿ ತಮ್ಮ ಅಧಿಪತ್ಯವನ್ನು ಎಲ್ಲೆಡೆ ವಿಸ್ತರಿಸಲು ಸಾಧ್ಯವಾಯಿತು. ಸುವ್ಯವಸ್ಥಿತವಾದ ಪ್ರಬಲ ಕೇಂದ್ರ ಪ್ರಭುತ್ವ ಹಾಳಾಗಿ ದಕ್ಷಿಣ ಬಾರತದಲ್ಲಿ ಪಾಳೆಯಗಾರರು ಸ್ವತಂತ್ತರಾಗಿ ಪ್ರಭುತ್ವ ನಡೆಸಲು ಮೊದಲು ಮಾಡಿದರು.[೧೧]

ಆಧುನಿಕ ಬರಹಗಾರರು ವಿಜಯನಗರ ಸಾಮ್ರಾಜ್ಯ ತಾಳಿಕೋಟೆ ಯುದ್ಧದಿಂದಾಗಿ ಸಂಪೂರ್ಣವಾಗಿ ಕೊನೆಗಾಣಲಿಲ್ಲವೇಂದು ಅಭಿಪ್ರಾಯ ಪಟ್ಟಿದ್ದಾರೆ. ಅವರು ಹೇಳಿರುವಂತೆ "ತಾಳಿಕೋಟೆ ಯುದ್ಧವು ವಿಜಯನಗರ ಸಾಮ್ರಾಜ್ಯದ ವಿನಾಶವಾಗಿದ್ದಿತು. ಆದರೆ ಅದರ ಅಂತ್ಯವಾಗಿರಲಿಲ್ಲ. ಈ ಯುದ್ಧದಿಂದ ವಿಜಯನಗರ ಹಾಳಾಯಿತೇ ವಿನಃ ವಿಜಯನಗರ ಸಾಮ್ರಾಜ್ಯ ಅಂತ್ಯಗೊಳ್ಳಲಿಲ್ಲ. ಆ ಸಾಮ್ರಾಜ್ಯ ೧೭ ನೇ ಶತಮಾನದ ಮಧ್ಯಭಾಗದವರೆಗೆ ಜೀವಂತವಾಗಿದ್ದಿತು. ಅರವೀಡು ಸಂತತಿಯ ಆಳ್ವಿಕೆಯಲ್ಲಿ ಅದು ಮುಂದುವರೆಯಿತು. ಅದರ ರಾಜಧಾನಿಗಳು ಮಾತ್ರ ಬದಲಾದವು.ವಿಜಯಿಗಳಾದ ಮುಸ್ಲಿಮರು ತಮ್ಮ ವಿಜಯದಿಂದ ಯಾವುದೇ ಶಾಶ್ವತ ಲಾಭ ಪಡೆಯಲಿಲ್ಲ ಅವರು ಕಟ್ಟಿದ ಒಕ್ಕೂಟ ಬೇಗ ಮುರಿದು ಬಿದ್ದಿತು.ಸುಲ್ತಾನರ ಪರಸ್ಪರ ದ್ವೇಷ, ವೈಷಮ್ಯ ಮತ್ತು ಸಂಶಯಗಳೇ ಇದ್ದಕ್ಕೆ ಕಾರಣವಾದವು.ಅವರ ನಡುವೆ ಮತ್ತೊಮ್ಮೆ ಹೋರಟಗಳು ಮೊದಲಾದವು.ಅಂತಿಮವಾಗಿ ಮೊಘಲರು ಈ ಷಾಹಿ ರಾಜ್ಯಗಳನ್ನು ಗೆದ್ದು ದಖ್ಖಿನ್ನಿನಲ್ಲಿ ತಮ್ಮ ಸಾರ್ವಭೌಮತ್ವ ಸ್ಥಾಪಿಸಿದರು.[೧೨]

### ಅರವೀಡು ಸಂತತಿ (ಕ್ರಿ.ಶ.೧೫೭೦–೧೬೪೬)

ತಾಳಿಕೋಟೆ ಕದನವು ವಿಜಯನಗರ ಸಾಮ್ರಾಜ್ಯದ ಅಂತ್ಯ ಸೂಚನೆವೇನೂ ಆಗಿರಲಿಲ್ಲ. ತಾಳಿಕೋಟೆ ಕದನದ ನಂತರ ರಾಮರಾಯನ ಸೋದರ ತಿರುಮನು ಪೆನುಗೊಂಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದನು. ಈತನು ರಾಜಧಾನಿಯನ್ನು ಹಂಪಿಯಿಂದ ಪೆನುಗೊಂಡಕ್ಕೆ ವರ್ಗಾಯಿಸಿದನು. ಇವನು ಸೆರೆಮನೆಯಲ್ಲಿದ್ದ ಸದಾಶಿವನನ್ನು ಕೊಲೆ ಮಾಡಿ ಅರವೀಡು ಸಂತತಿಯನ್ನು ಸ್ಥಾಪಿಸಿದನು. ಇವನ ಪೂರ್ವಿಕರು ಕರ್ನೂಲಿನ ಅರವೀಡು

ವಂಶಕ್ಕೆ ಸೇರಿದ್ದರು. ಇವನ ರಾಜ್ಯದಲ್ಲಿ ಮೂರು ಮಂಡಲಗಳಿದ್ದವು. ಅವುಗಳಲಗಲಿ ಆಂಧ್ರವನ್ನು ಶ್ರೀರಂಗನೂ. ಕರ್ನಾಟಕದ ಶ್ರೀರಂಗಪಟ್ಟಣವನ್ನು ೨ ನೇ ಮಗ ರಾಮರಾಯನಿಗೂ. ತಮಿಳುನಾಡಿನ ಚಂದ್ರಗಿರಿಯನ್ನು ವೇಂಕಟ ಪತಿಗೆ ವಹಿಸಿದ್ದನು. ಆದರೆ ಈ ವಿಭಜನೆ ಅವನ ಮಕ್ಕಳಲ್ಲಿ ಮತ್ಸರ ಭಾವನೆ ಮೂಡಿಸಿತು ನಂತರ ಅವನ ಹಿರಿಯ ಮಗ ೧ನೇ ಶ್ರೀರಂಗನು ೧೫೭೨ ರಲ್ಲಿ ಪಟ್ಟವೇರಿದನು ಇವನ ಕಾಲದಲ್ಲಿ ಬಿಜಾಪುರ ಮತ್ತು ಗೋಲ್ಕೊಂಡ ಸುಲ್ತಾನರು ಕೊಂಡವೀಡನ್ನು ಮುತ್ತಿದರು ಇವನ ನಂತರ ತಿರುಮಲನ ೩ನೇ ಮಗ ೨ನೇ ವೆಂಕಟಪ್ಪ ರಾಜನಾದನು ಇವನು ಗೋಲ್ಕೊಂಡ ಮತ್ತು ಬಿಜಾಪುರ ಸೈನ್ಯಗಳನ್ನು ಸೋಲಿಸಿದನು ತನ್ನ ವಿರುದ್ಧ ದಂಗೆ ಎದ್ದ ವೆಲ್ಲೂರು, ಮಧುರೈ ಮತ್ತು ಜಿಂಜಿ ಪಾಳೆಯಗಾರರನ್ನು ಅಡಗಿಸಿದನು ವೆಂಕಟನಿಗೆ ಮಕ್ಕಳರಲಿಲ್ಲ ವೆಂಕಟನ ನಂತರ ಅವನ ಅಣ್ಣನ ಮಗ ೨ನೇ ಶ್ರೀರಂಗರಾಯನು ಅಧಿಕಾರಕ್ಕೆ ಬಂದನು.

**ಪೆನುಕೊಂಡ**

ವಿಜಯನಗರ ಪತನವಾಗುತ್ತಲೇ ತಿರುಮಲ ಹೋಗಿ ಪೆನುಕೊಂಡದಲ್ಲಿ ಆಶ್ರಯ ಪಡೆದ.ಸ್ವಲ್ಪ ಕಾಲ ಕಳೆದ ನಂತರ ಪೋರ್ಚುಗಿಸರಿಗೆ ಕುದುರೆಗಳು ಬೇಕಾಗಿವೆ ಎಂದು ಹೇಳಿ ಕಳಿಸಿದ ನಂತರ ಕುದುರೆಗಳನ್ನು ತಂದು ಕೊಟ್ಟ ವರ್ತಕರಿಗೆ ಅವುಗಳ ಹಣವನ್ನೇ ಕೊಡಲಿಲ್ಲ. ಆಗ ವರ್ತಕರು ಏನು ಮಾಡಬೇಕೆಂದು ತಿಳಿಯದೇ ಕಂಗಾಲಾದರು.

ತಿರುಮಲ ಸದಾಶಿವನ ಜೊತೆ ಪೆನುಕೊಂಡುಕೆ ಪಲಾಯನ ಮಾಡಿದ ನಂತರ ಇಡೀ ಸಾಮ್ರಾಜ್ಯ ಅರಾಜಕತೆಗೆ ಸಿಲುಕೀತು ಸಮಂತ ರಾಜತು ಬಬ್ಬರ ನಂತರ ಮತ್ತೊಬ್ಬರು ಸ್ವಾತಂತ್ರ್ಯ ಘೋಷಸಿಕೊಳ್ಳಲಾರಂಭಿಸಿದರು. ಅಲ್ಲಿಯವರೆಗೂ ದಕ್ಷಿಣ ಭಾರತದ ಅತಿ ದೊಡ್ಡ ಸಾಮ್ರಾಜ್ಯವಾಗಿದ್ದ ವಿಜಯನಗರ ನೋಡ ನೋಡುತ್ತಿದ್ದಂತೆಯೇ ಕರಗಿ ಹೋಯಿತು. ಅಂತಹ ಒಂದು ಸಾಮ್ರಾಜ್ಯ ಇತ್ತು ಎಂದರೆ ನಂಬಲಾಗದ ಸ್ಥಿತಿಗೆ ಬಂದು ಹೋಯಿತು. ಪೆನುಕೊಂಕ್ಕೆ ಪಲಾಯನ ಮಾಡಿದ್ದ ರಾಜಪರಿವಾರದ ನೇತೃತ್ವ ವಹಿಸಿದ್ದ ತಿರುಮು ತನ್ನಿಂದ ಎಷ್ಟಾಗುತ್ತೋ ಅಷ್ಟು ಆಡಳಿತ ನಡೆಸ ತೊಡಗಿದ.

೧೫೬೮ ರಲ್ಲಿ ತಿರುಮಲ ರಾಜನ ಸ್ಥಾನದಲ್ಲಿದ್ದ ಸದಾಶಿವವನ್ನು ಕೊಂದು ತಾನೇ ಸಿಂಹಾಸನ ಆಕ್ರಮಿಸಿಕೊಡು ಎಂದು ಹೇಳಲಾಗುತ್ತದೆ.ಆದರೆ ಇದಕ್ಕೆ ಆಧಾರಗಳಲ್ಲ. ಬದಲಿಗೆ ೧೫೬೭. ಫೆಬ್ರವರಿ ೫ನೇ ತಾರೀಖಿನ ಶಾಸನವೊಂದು ಅಲ್ಲಿವರೆಗೂ ತಿರುಮಲ, ಸದಾಶಿವನೇ ಅರಸ ಎಂದು ನಡೆದು ಕೊಳ್ಳುತ್ತಿದ್ದ ಎಂದು ಹೇಳುತ್ತದೆ. ಎಲ್ಲವೂ ಲೂಟಿಯಾದರೂ. ವಿಜಯನಗರದ ಸಂಪತ್ತು ಲೂಟಿ ಮಾಟಲು ಆಗದಷ್ಟು ಇತ್ತು ಎನ್ನಬಹುದು. ಪತನಕ್ಕೆ ಮುನ್ನವೇ ರಾಜಪರಿವಾರ ಸುಮಾರು ೧೫೦೦ ಆನೆಗಳ ಮೇಲೆ ಸಂಪತ್ತನ್ನು ಹೇರಿಕೊಡು ಹೊರಟು ಹೋಯಿತು. "ಬಾರ್ಬೋಸ್"ಹೇಳುವಂತೆ "ವಿಜಯನಗರದಲ್ಲಿ ಏನೂ

ಉಳಿಯದಂತೆಮುಸ್ಲಿಮರು ದಾಳಿಕೋರರು ಲೂಟಿ ಮಾಡಿ ಹೋಗಿದ್ದರೂ,ರಾಜನ ಖಜಾನೆಯಲ್ಲಿ ಬೆಲೆ ಬಾಳುವ ಆಭರಣಗಳು, ವಜ್ರಗಳು. ಇದ್ದವು.೧೬೧೪ ರಲ್ಲಿ ಚಂದ್ರಗಿರಿಗೆ ಹೋದಾಗರಾಜನಕಜಾನೆಯಲ್ಲಿ ವಜ್ರ ವೈಢೂರ್ಯ.ವಿವಿಧ ರೀತಿ ಬೆಲೆ ಬಾಳುವ ಹರಳುಗಳನ್ನು ತುಂಬಿದ್ದ ಮೂರು ಪೆಟ್ಟಿಗೆಗಳನ್ನು ನೋಡಿದೆ" ಎಂದು ಉಲ್ಲೇಖಿಸಿದ್ದಾನೆ.[೨]

**ಬಸಾತಿನೆ – ಸಲಾತೀನ ಕೃತಿಯಲ್ಲಿ ಹಂಪಿನಾಶದ ಬಗ್ಗೆ ವಿವರಣೆ**

ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಅವಧಿಯಲ್ಲಿ ಕರ್ನಾಟಕವನ್ನು ವಿವಿಧ ಅರಸು ಮನೆತನಗಳು ಆಳ್ವಿಕೆ ಮಾಡಿದರು ಈ ಅರಸು ಮನೆತನಗಳ ಕಾಲದಲ್ಲಿ ಬರೆದ ಶಾಸನಗಳು ನಿರ್ಮಿಸಿದ ಕೋಟೆ ಕೊತ್ತಲಗಳು ಅರಮನೆಗಳು ದೇವಾಲಯ ಮೂರ್ತಿ ಶಿಲ್ಪಗಳು ಕೆರೆ–ಕಟ್ಟೆ ಮೊದಾಲಾದವುಗಳನ್ನು ಇತಿಹಾಸ ರಚನೆಯಲ್ಲಿ ಪುರಾತತ್ವ ಆಕರಗಳನ್ನಾಗಿ ಹಾಗೂ ಆಸ್ಥಾನದ ಕವಿಪಂಡಿತರು ರಚಿಸಿದ ಕೃತಿಗಳು, ಹೊರಡಿಸಿದ ರಾಜಾಜ್ಞೆಗಳು, ವಂಶಾವಳಿಗಳು, ದಿನಚರಿ ಮತ್ತು ಪ್ರವಾಸ ವರದಿಗಳು ಇತರೆ ಸಾಹಿತ್ಯಿಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ ಇವುಗಳೊಂದಿಗೆ ಸ್ಥಳೀಯ ಐತಿಹ್ಯಗಳೂ ಮುಖ್ಯವೆನಿಸುತ್ತದೆ. ಈ ಎಲ್ಲ ಆಕರಗಳನ್ನು ಬಳಸಿದರೂ ಇತಿಹಾಸ ರಚನೆ ಏಕಬಗೆಯಾಗಿರುದಿಲ್ಲ ಇತಿಹಾಸಕಾರನ ಪ್ರದೇಶ, ಭಾಷೆ, ಧರ್ಮ, ಸಂದರ್ಭ, ಮನಃಸ್ಥಿತಿ ಮುಂತಾದವು ನಿರೂಪನ ಶೈಲಿಯನ್ನು ವಿಭಿನ್ನಗೊಳಿಸುತ್ತವೆ.

ದಕ್ಷಿಣ ಭಾರತದಲ್ಲಿ ಮೂರು ಶತಮಾನಗಳ ಕಾಲ ಆಳ್ವಿಕೆ ಮಾಡಿದ ವಿಜಯನಗರದ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಅನೇಕ ಬಗೆಯಲ್ಲಿ ಆಕರಗಳು ಲಭ್ಯವಿದ್ದರೂ ಆರಂಭ ಮತ್ತು ಅಂತ್ಯವನ್ನು ಕುರಿತು ಅನೇಕ ಭಿನ್ನಭಿಪ್ರಾಯಗಳಿವೆ ಕ್ರಿ.ಶ.೧೫೬೫ರ ನಂತರ ವಿಜಯನಗರ ಸಮ್ರಾಜ್ಯದ ಕೇಂದ್ರವಾದ ಹಂಪಿ ನಾಶವಾಯಿತು ಇದಕ್ಕೆ ಯುದ್ಧದಲ್ಲಿ ಜಯಗಳಿಸಿದ ಮುಸ್ಲಂರ ದಾಳಿಗಳು, ಶೈವ–ವೈಷ್ಣವರ ಕಲಹ ಮತ್ತು ಸ್ಥಳೀಯರ ದುಷ್ಟತ್ಯಗಳೂ ಹಂಪಿನಾಶಕ್ಕೆ ಕಾರಣಗಳನ್ನು ಗುರುತಿಸಲಾಗಿದೆ. ಆಗಿನ ಸಂದರ್ಭಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ಮೂರು ಅಂಶಗಳನ್ನು ಅಲ್ಲಗಳೆಯುವಂತಿಲ್ಲ ಇವುಗಳಲ್ಲಿ ರಕ್ಕಸಗಿ – ತಂಗಡಗಿ ಯುದ್ಧದಲ್ಲಿ ಸುಲ್ತಾನರ ವಿಜಯವು ಬಹಳ ಮುಖ್ಯವಾದುದು. ಮುಸ್ಲಿಂ ಸೈನ್ಯಗಳು ಸಿರಿಸಂಪತ್ತಿನಿಂದ ಕಂಗೊಳಿಸುತ್ತಿದ್ದ ರಾಜಧಾನಿ ಹಂಪಿಗೆ ಬಂದು ಸಾಮ್ರಾಜ್ಯವನ್ನು ವಿಕಾರಗೊಳಿಸಿದರೆಂಬ ಮಾತನ್ನು ಅನೇಕ ಮುಸ್ಲಿಂ ಕವಿಗಳು ಬರೆದಿದ್ದಾರೆ ಇದನ್ನು ವಿಮರ್ಶಾತ್ಮಕವಾಗಿ ಅವಲೋಕಿಸಿದರೆ ಎಷ್ಟದ ಮಟ್ಟಿಗೆ ಸತ್ಯ ಅಡಗಿದೆಎಂಬ ಪ್ರಶ್ನೆ ಉಮಟಾಗುತ್ತದೆ ಆಳುವ ದೊರೆಗಳ ಆಶ್ರಯವನ್ನು ಅವಲಂಬಿಸಿದ ಇವರು ರಾಜ್ಯದ ವೈಭವೀಕರಣ ಮತ್ತು ಅರಸನ ಹೊಗಳಿಕೆಯ ಮಾತುಗಳೇ ಅವರ ಬರವಣಿಗೆಯಲ್ಲಿ ಸೇರ್ಪಡೆಗೊಂಡಿರುತ್ತದೆ ಆದರೂ ವಿಜಯನಗರ ಸಂದರ್ಭದಲ್ಲಿ ರಾಜಧಾನಿ ಹಂಪಿ ವಿನಾಶಕ್ಕೆ ಮುಸ್ಲಿಂ ಸೈನಿಕರ ಕಾರ್ಯಚಟುವಟಿಕೆಗಳು ಮುಖ್ಯವಾಗುತ್ತವೆ. ಕರ್ನಾಟಕ ಚರಿತ್ರೆಯಲ್ಲಿ ಚಾಲುಕ್ಯ ಪಲ್ಲವರ ಆದಿಯಾಗಿ ಅನೇಕ ಇಂಥ ಘಟನೆಗಳನ್ನು ಗಮನಿಸಬಹುದು ಆದರೆ ಅವು ವಿಜಯನಗರದಷ್ಟು ಭೀಕರವಾಗಿರಲಿಲ್ಲ ಮಹಮ್ಮದ ಇಬ್ರಾಹಿಂ ಜುಬೇರಿ ರಚಿಸಿದ ವಿಜಾಪುರ

ಆದಿಲಶಾಹಿಗಳ ಚರಿತ್ರೆ ಕುರಿತು ಬುಸಾತಿನಿ –ಸಲಾತೀನ ಎಂಬ ಕೃತಿಯಲ್ಲಿ ಸುಲ್ತಾನರ ಗೆಲುವು ಮತ್ತು ಹಂಪಿ ನಾಶದ ಚಿತ್ರಣವನ್ನು ನೀಡಲಾಗಿದೆ. ವಿಜಾಪುರದ ಮಹಮ್ಮದ ಇಬ್ರಾಹಿಂ ಜುಬೇರಿ ಎಂಬುವನು ಕ್ರಿ.ಶ.೧೮೨೪–೩೦ರ ಮಧ್ಯ ರಚಿಸಿದ ಮೂಲ ಪರ್ಶಿಯನ್ ಕರತಿ ನಂತರ ಇದನ್ನು ದಖನಿ, ಹಿಂದಿ ದೇವನಾಗರಿ, ಉರ್ದುವಿಗೆ ಅನುವಾದ ಮಾಡಲಾಗಿದೆ ೧೯೯೩ರಲ್ಲಿ ಕೃಷ್ಣಕೊಲ್ಹಾರ ಕುಲಕರ್ಣಿಯವರು ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ ಮುಖ್ಯವಾಗಿ ಈ ಗ್ರಂಥದಲ್ಲಿ ವಿಜಾಪುರ ಸುಲ್ತಾನರನ್ನು ಗಮನದಲ್ಲಿಟ್ಟುಕೊಂಡು ಅವರ ಜೀವನ ವೃತ್ತಾಂತವನ್ನು ಬರೆಯಲಾಗಿದೆ. ಇದು ಆದಿಲ್ ಶಾಹಿಗಳ ಉತ್ತರ ಕಾಲದಲ್ಲಿ ಅಂದರೆ ಸುಮಾರು ೧೪೦ ವರ್ಷಗಳ ನಂತರ ರಚಿತವಾಗಿದೆ. ಗ್ರಂಥಕಾರನು ಇದನ್ನು ಬರೆಯುವಾಗ ಅನೇಕ ಸಮಕಾಲೀನ ಗ್ರಂಥಗಳನ್ನು ಬಳಸಿಕೊಂಡಿದ್ದಾನೆ. ಅವುಗಳಲ್ಲಿ ಮಹಮ್ಮದ ಕಾಸಿಮ ಫಿರಿಸ್ತಾ (೧೬೦೬–೧೦)–ನವರಸನಾಮ ಫರಿಶ್ತಾ–ಗುಲ್ಶನೆ ಇಬ್ರಾಹಿಮೀ, ಮೀರ ರಫೀ ಉದ್ಧೀನ ಶಿರಾಜೀ (೧೬೦೮–೦೯) ತಜಕರದುಲ ಮುಲುಕ ಮುಲ್ಲಾ ಜಹೂರ ವಲದ ಮುಲ್ಲಾ ಜಹರೀ (೧೬೭೬ ಮೊದಲು) ಆಲೀನಾಮಾ, ಮಿಯಾ ನರಸತಿ – ಗುಲಶನೆ ಇಷ್ಟೆಶೇಖ ಅಬದುಲ ಹಸನ ವಲದ ಕಾಜೀ ಅಬದುಲ ಅಜೀಜ (೧೭೦೦ ಮೊದಲು)–ತಬೆಯಕ ಆದಿಲಶಾಹೀ ಶೇಖ ಮಹಮ್ಮದ ಬ್ಘರೀ (ಸು.೧೭೦೦) – ಜಹ್ವೆರರೂಹ ಮತ್ತು ಜಹವೇರಿ ಕುನಿಯಾಕೃತಿಗಳು ಇವುಗಳನ್ನು ಬಳಿಸಿಕೊಂಡಿದ್ದರಿಂದ ಬುಸಾತಿನೆ–ಸಲಾತೀನ ಗ್ರಂಥಕ್ಕೆ ಐತಿಹಾಸಿಕ ಮಹತ್ವ ದೊರೆಯುತ್ತದೆ ಪ್ರಸ್ತುತ ಗ್ರಂಥದಲ್ಲಿ ಆದಿಲಶಾಹಿಗಳಿಗೆ ಹೆಚ್ಚು ಮಹತ್ವ ದೊರೆತಿದ್ದರೂ ಸಮಕಾಲೀನ ಅರಸುಭಾಗಗಳ ಮಾಹಿತಿಗಳನ್ನು ಪಡೆದು ವಿಜಯನಗರ ನಾಶದ ಬಗೆಗೆ ಚರ್ಚಿಸಲಾಗಿದೆ.[೧೪]

ವಿಜಯನಗರ ಸಾಮ್ರಾಜ್ಯದ ಪತನ ಮತ್ತು ಹಂಪಿ ನಾಶವನ್ನು ಕುರಿತಂತೆ ಎಂ.ಚಿದಾನಂದಮೂರ್ತಿ,ಎಂ.ಎಂ.ಕಲಬುರ್ಗಿ ಮತ್ತು ಪಿ.ರತ್ನಾವತಿ ಅವರ ಸಂವಾದವನ್ನು ಪ್ರಜಾವಾಣಿ ದಿನಪತ್ರಿಕೆಯ ಸಾಪ್ತಾಹಿಕ ಪುರವಣಿಯಲ್ಲಿ (ಅಕ್ಟೋಬರ್.೨೦೦೮) ರಲ್ಲಿ ಪ್ರಕಟಿಸಲಾಗಿದೆ ಈ ಮೂರು ಸಂವಾದಗಳು ಹಂಪಿನಾಸದ ಬಗ್ಗೆ ವಿಭಿನ್ನ ರೀತಿಯಲ್ಲಿ ಅರ್ಥೈಸುವ ಸಾದ್ಯತೆಯನ್ನು ವ್ಯಕ್ತಪಡಿಸುತ್ತವೆ ರಕ್ಕಸಗಿ–ತಂಗಡಗಿ ಯುದ್ಧದ ಪರಿಣಾಮವನನು ಚರ್ಚಿಸುವಾಗಲೂ ವಿದ್ವಾಂಸರು ವಿಭಾನ್ನ ಹೇಳಿಕೆಗಳನ್ನು ಗಮನಿಸಬಹುದಾಗಿದೆ. ರಕ್ಕಸಗಿ – ತಂಗಡಗಿ ಯುದ್ಧದಲ್ಲಿ ವಿಜಯನಗರ ಸೈನ್ಯ ಸೋತು ಇಡೀ ಸಾಮ್ರಾಜ್ಯದ ವ್ಯವಸ್ಥೆಯೇ ಕಣ್ಮರೆಯಾಯಿತು ಅಳಿಯ ರಾಮರಾಯನ ಮರಣ ಹಂಪಿಯ ವೈಭವವನ್ನೆ ನಾಶವಾಗುವಂತೆ ಮಾಡಿತು ಈ ಗ್ರಂಥದಲ್ಲಿ ಉಲ್ಲೇಖಿಸಿರುವಂತೆ ಯುದ್ಧದಲ್ಲಿ ಸೋತ ಸೈನಿಕರು ಪ್ರಾಣ ಭೀತಿಯಿಂದ ತಪ್ಪಿಸಿಕೊಂಡು ಓಡತೊಡಗಿದರು ಆಗ ಮುಸಲ್ಮಾನರ ಸೈನಿಕರು ಎಲ್ಲೆಂದರಲ್ಲಿ ಸಾಮೂಹಿಕವಾಗಿ ಕೊಲೆಗೈದರೂ ಸೈನಿಕರು ಹಲ್ಲೆಯಾದಲ್ಲೆಲ್ಲ ಹಿಂದುಗಳ ಪ್ರೇತಗಳ ರಾಶಿಯನ್ನು ಒಟ್ಟಲಾಗಿತ್ತು ಕತ್ತರಿಸಿಬಿದ್ದ ಹಿಂದುಗಳ ರಕ್ತ ಎಷ್ಟೋ ಕೋಸುಗಳವರೆಗೆ ಹರಿದು ಭೂಮಿಯೆಲ್ಲಾ ತಾಮ್ರಮರ್ಾದ್ದಾಗಿತ್ತು.

ಈ ವರ್ಣನೆಯಲ್ಲಿ ಯುದ್ಧದ ಗೆಲುವಿನ ಪ್ರಶಂಸೆಯ ಮಾತುಗಳನ್ನು ಸಹಜವಾಗಿಯೇ ಗಮನಿಸಬುದು ಇಂಥ ಭಯಂಕರ ಯುದ್ಧಗಳು ತಲತಲಾಂತರದಿಂದ ನಡೆಯುತ್ತ ಬಂದಿವೆ ಎಷ್ಟೋ ಸೈನಿಕರು ಸಾಮ್ರಾಜ್ಯಕ್ಕಾಗಿ ತಮ್ಮ ಪ್ರಾಣವನ್ನು ತೆತ್ತಿದ್ದಾರೆ. ಆದರೆ ವಿಜಯನಗರ ಸಂದರ್ಭದಲ್ಲಿ ಬೇರೆಯೇ ಚಿತ್ರಣವನ್ನು ನಿರೂಪಿಸಲಾಗಿದೆ. ಇಲ್ಲಿ ಹಿಂದು ಎಂಬ ಪದಬಳಕೆ ಮುಸ್ಲಿಂರ ವೈಭವದ ಸಂಕೇತವಗಿದೆ ಹಾಗಾದರೆ ಮುಸ್ಲಿಂ ಸೈನಿಕರಾರು ಸಾಯಲಿಲ್ಲವೆ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ ಯುದ್ಧದ ಘಟನೆಗಳು ಆ ಪರಿಸರದ ಜನರ ಬಾಯಿಯಲ್ಲಿ ತಲತಲಾಂತರದಿಂದ ಉಳಿದು ಬಂದಿವೆ. ಯುದ್ಧದಲ್ಲಿ ಸತ್ತ ನೂರಾರು ಸೈನಿಕರನ್ನು ತಮದು ಸುಟ್ಟದ್ದರಿಂದ ಬೂದಿಹಾಳ ಎಂಬ ಗ್ರಾಮನಾಮವಾಯಿತೆಂದು ಜನರು ಹೇಳುತ್ತಾರೆ.

ಈ ಅವಧಿಯಲ್ಲಿ ಸುಲ್ತಾನರು ಒಂದು ಸಾರಿದರು ಆನೆಗಳು ತೋಪುಗಳು, ಧ್ವಜದಂತಿರುವ ಸೈನ್ಯದ ಡಾಲುಗಳು, ಚಾಘಡಗಳು, ವಾಧ್ಯಗಳು, ಬಾದಶಾಹಿ, ಥಿಂಟೆನ ಪದಾರ್ಥಗಳನ್ನು ಯಾರೂ ತೆಗೆದು ಕೊಂಡು ಹೋಗಬಾರದು ಉಳಿದದ್ದರಲ್ಲಿ ಏನನ್ನು ಇಡಬೇಡಿರಿ ಯಾರ ಕೈಗೆ ಏನೆಲ್ಲ ಹಣ, ಮುತ್ತುರತ್ನಗಳು, ಆಭರಣಗಳು, ವಸ್ತ್ರಗಳು, ಬೆಲೆಬಾಳುವ ಬಟ್ಟೆಗಳು ದೊರೆಯುತ್ತವೆಯೋ ಅವೆಲ್ಲವುಗಳನ್ನು ಒಯ್ಯಲು ಅನುಮತಿ ನೀಡಲಾಗಿದೆ ಹಾಗೆಯೇ ಅಪಹರಿಸಿದ ವಸ್ತುಗಲನ್ನು ಅವರಿಂದ ಇನ್ನೊಬ್ಬರನ್ನು ಅಪಹರಿಸದಂತೆ ಆಜ್ಞೆಮಾಡಲಾಗಿದೆ. ಈ ಆಜ್ಞೆಯಿಂದ ಕಾರ್ಯಪ್ರವೃತ್ತರಾದ ಬಾದಶಹರ ಸೈನಿಕರು ಬಂಗಾರ, ಬೆಳ್ಳಿ, ಆಭರಣಗಳು, ಮುತ್ತುರತ್ನಗಳು, ತಲವಾರಗಳು ಲೋಹದ ಟೊಪ್ಪಿಗಳು ಮುಂತಾದವುಗಳನ್ನು ಸಂಗ್ರಹಿಸಿ ಆಯುಷ್ಯ ಪರ್ಯಂತ ದುಡಿಯುವ ಗರಜು ಇಲ್ಲವೆಂಬಂತೆ ಶ್ರೀಮಂತರಾದರು.

ಇಪ್ಪತ್ತು ದಿನಗಳ ಕಾಲ ನಡೆದ ಯುದ್ಧದಲ್ಲಿ ಕಂಗೆಟ್ಟಿದ್ದ ವಿಜಯನಗರ ಸೈನ್ಯ ರಣಬೂಮಿಯಿಂದ ಓಡಲು ಪ್ರಾಂಭಿಸಿತು. ಸುಲ್ತಾನರ ಸೈನ್ಯ ಆನೆಗುಂದಿಯ, ಆನೆಗುಂದಿಯಿಂದ ಹತ್ತು ಕೋಸು ದೂರವಿರುವ ವಿಜಯನಗರದವೆಗ ಅಟ್ಟಿಸಿಕೊಂಡು ಬಂತು ದಾರಿಯುದ್ದಕ್ಕೂ ಹೆಣಗಳ ರಾಶಿ ಬಿದ್ದಿತ್ತು ಆಗ ಲೆಕ್ಕ ಬರೆಯುವ ಗುಮಾಸ್ತನಿಗೆ ಸತ್ತವರೆ ಮತ್ತು ಗಾಯಕೊಂಡವರ ಗಣತಿ ಮಾಡಲು ಹೇಳಲಾಯಿತು ಅವನು ೧೨ ದಿನಗಳ ಕಾಲ ಗಣತಿ ಮಾಡಿ ಸತ್ತವರ ಸಂಖ್ಯೆ/ ಲಕ್ಷವೆಂದು ವರದಿ ತಯಾರಿಸಿದನು.

ರಾಮರಾಯನ ಸಹೋದರ ತಿಮ್ಮರಾಜುನ ಪೆನುಗೊಂಡೆಯ ಕೋಟೆಯಲ್ಲಿ ಆಶ್ರಯ ಪಡೆದನು ರಾಮರಾಯನ ಮಗ ಪೆದ್ದ ತಿರುಮಲ ತನ್ನ ಆಪ್ತಮಂಡಳಿಯನ್ನು ಕರೆದುಕೊಂಡು ಹೋಗಿ ಆನೆಗುಂದಿಯಿಂದ ಮೂರು ಕೋಸು ದೂರದಲ್ಲಿ ಒಂದು ಬೆಟ್ಟದ ಮೇಲಿನ ವಿಶಾಲವಾದ ಗುಹೆಯನ್ನು ಸೇರಿ ಕಾಲಹರಣ ಮಾಡಿದನೆಂದು ಉಲ್ಲೇಖಿಸಲಾಗಿದೆ.

ಈ ಯುದ್ಧದಲ್ಲಿ ಪ್ರಾಣ ಉಳಿಸಿಕೊಂಡಿದ್ದ ತಿರುಮಲ ೧೫೦ ಆನೆಗಳ ಮೇಲೆ ಮುಖ್ಯವಾದ ವಸ್ತಗಳನ್ನು ಹೇರಿಕೊಂಡು ಅರಮನೆಯ ಸ್ತ್ರೀಯರು ಮತ್ತು ಬಂಧುಗಳನ್ನು ಕರೆದುಕೊಂಡು ಚಂದ್ರಗಿರಿಗೆ ತೆರಳಿದನು. ಈ ಕೃತಿಯ ಪ್ರಕಾರ ರಾಮರಾಯನ ಮಗ ಪೆದ್ದ ತಿರುಮಲ ಅರಮನೆಯ ಆಪ್ತಮಂಡಳಿಯೊಂದಿಗೆ ಆನೆಗುಂದಿಯ ಗವಿಯನ್ನು ಸೇರಿದ. ಆನೆಗುಂದಿಯಿಂದ ಮೂರು ಕೋಸು ದೂರದಲ್ಲಿ ಎಂಬ ಉಲ್ಲೇಖ ದುರ್ಗಾ ಬೆಟ್ಟವನ್ನು ಸೂಚಿಸುತ್ತದೆ. ಈ ದುರ್ಗಾ ಬೆಟ್ಟದಲ್ಲಿ ವಿಶಾಲವಾದ ಜಾಗ ಮತ್ತು ವಸತಿ ನೆಲೆಯನ್ನು ಗುರುತಿಸಬಹುದಾಗಿದೆ ಅರಮನೆಯ ಪರಿಚಾರಕ ವರ್ಗ ಹಂಪಿಯಿಂದ ತೆರವುಗೊಂಡಿದ್ದರಿಂದ ರಾಜಧಾನಿಯ ಬಾಗಿಲು ತೆರೆದಂತಾಯಿತು ಮುಸ್ಲಿಂ ಸೈನಿಕರಲ್ಲದೆ ಹಾರೆ ಗುದ್ದುಲಿಸಹಿತ ಕಳ್ಳಕಾರರು ರಾಜಧಾನಿಯನ್ನು ಪ್ರವೇಶಿಸಿದರು ಇದಕ್ಕೆ ಮುಖ್ಯಕಾರಣ ಸುಲ್ತಾನರು ಸಾರಿದ ಡಂಗುರ ಇದು ಹಂಪಿ ನಾಶಕ್ಕೆ ಪ್ರಮುಖ ಕಾರಣವಾಗುತ್ತದೆ ಯಾರ ಕೈಗೆ ಏನೆಲ್ಲ ಹಣ, ಮುತ್ತುರತ್ನಗಳು, ಆಭರಣಗಳು, ವಸ್ತ್ರಗಳು, ಬೆಳೆಬಾಳುವ ಬಟ್ಟೆಗಳು ದೊರೆಯುತ್ತವೆಯೋ ಅವೆಲ್ಲವುಗಳನ್ನು ಒಯ್ಯಲು ಅನುಮತಿ ನೀಡಲಾಗಿದೆ ಈ ಅನುಮತಿಯಿಂದ ಕಾರ್ಯಪ್ರವೃತ್ತರಾದ ದರೋಡೆಕೋರರು ರಾಜಧಾನಿಯನ್ನು ಲೂಟಿ ಮಾಡಿ ವಿಖಾರಗೊಳಿಸಿದರು ಪೋರ್ಚುಗೀಸ್ ವರದಿಗಳು ಹಂಪಿ ವಿನಾಶದ ಹೊಣೆಯನ್ನು ಮುಸ್ಲಿಂ ಮೇಲೆ ಹೊರಿಸಿದಂತೆ ಕಾಣುತ್ತದೆ.[೧೫]

**ಅಡಿ ಟಿಪ್ಪಣಿಗಳು**

೧. ಶಿವಪ್ರಸಾದ ಟಿ.ಆರ್., ಶ್ರೀಕೃಷ್ಣದೇವಾರಯ, ೨೦೦೯, ಪು. ಸಂ.೧೪-೧೬

೨. ಸುಧಾಕರ್, ಕರ್ನಾಟಕ ಇತಿಹಾಸ ಸಮೀಕ್ಷೆ, ಪು.ಸಂ. ೧೮೪-೧೮೮

೩. ರಮಾನಂದ ಕೆ.ಕರ್ನಾಟಕದ ಸಂಕ್ಷಿಪ್ತ ಇತಿಹಾಸ ೨೦೧೦ ಪು.ಸಂ.೧೧೯

೪. ಅದೇ ಪು.ಸಂ.೧೨೦-೧೨೧

೫. ಲಕ್ಷ್ಮಣ್ ತೆಲಗಾವಿ, ರಾಮ ರಾಜನ ಬಖೈರು (ರಾಮಾಜಿ ತಿರುಮಲ ಹರಿಕಾರೆಯ), ೨೦೧೧, ಪು.ಸಂ. ೯೫.೯೭

೬. ಅದೇ ಪು.ಸಂ. ೯೮-೧೦೦

೭. ಅದೇ ಪು.ಸಂ. ೧೦೧-೧೦೨

೮. ಅದೇ ಪು.ಸಂ.೧೦೩-೧೧

೯. ಅದೇ ಪು.ಸಂ. ೧೧೧

೧೦. ಅದೇ ಪು.ಸಂ.೧೧೨

೧೧. ಸುಧಾಕರ, ಕರ್ನಾಟಕ ಇತಿಹಾಸ ಸಮೀಕ್ಷೆ ಪೂರ್ವೋಕ್ತ ಪು.ಸಂ.೧೯೦

೧೨. ಶಿವಪ್ರಸಾದ ಟಿ.ಆರ್., ಪೂರ್ವೋಕ್ತ ಪು.ಸಂ.೨೩೨.೨೩೩

೧೩. ಅದೇ ಪು.ಸಂ.೨೩೪

೧೪. ಸುಧಾಕರ ಕರ್ನಾಟಕದ ಇತಿಹಾಸ ಸಮೀಕ್ಷೆ ಪೊರ್ವೋಕ್ತ ಪು.ಸಂ.

೧೫. ಗೋಪಾಲ ಆರ್., ಚಿಕ್ಕಮಾರೇಗೌಡ. ಬಿ.ಎಮ್., ಗಂಗಾಧರ ಟಿ.ಎಸ್., ವಿಜಯನಗರ ಅಧ್ಯಯನ (ಸಂ.೧೫) ೨೦೧೦ ಪು.ಸಂಖ್ಯೆ. ೧೪೧-೧೪೫.

# ಅಧ್ಯಾಯ: ನಾಲ್ಕು

## ರಕ್ಕಸಗಿ–ತಂಗಡಗಿಯ ಕಾಳಗದ ನಂತರ ಹಂಪಿಯ ಸ್ಥಿತಿಗತಿಗಳು

ಹಂಪಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿ ಆಗಿದ್ದು, ಕ್ರಿ.ಶ. ೧೩೩೬ ರಲ್ಲಿ ಸ್ಥಾಪನೆಯಾಗಿ ೪ ಪ್ರಮುಖ ಮನೆತನಗಳಾದ ಸಂಗಮ. ಸಾಳ್ವ, ತುಳುವ, ಅರವೀಡು ಮನೆತನಗಳು ಆಳ್ವಿಕೆ ಮಾಡಿವೆ. ೧೫೬೬ರಲ್ಲಿ ನಡೆದ ರಕ್ಕಸಗಿ ತಂಗಡಗಿ ಕಾಳಗದ ನಂತರ ವಿಜಯನಗರ ಸಾಮ್ರಾಜ್ಯವು ವಿನಾಶದ ಅಂಚಿಗೆ ಸರೆಯಿತು. ಆದರೆ ಅರವೀಡು ವಂಶವು ಹಂಪಿಯಿಂದ ಪೆನುಗೊಂಡ ಹಾಗೂ ಚಂದ್ರಗಿರಿಯಿಂದ ಸುಮಾರು ೧೬೪೬ರ ವರೆಗೆ ತನ್ನ ಆಳ್ವಿಕೆಯನ್ನು ನಡೆಸಿತು. ನಂತರ ವಿಜಯನಗರ ಸಾಮ್ರಾಜ್ಯದ ಸಾಮಂತರಾದ ಚಿತ್ರದುರ್ಗದ ಪಾಳೆಯಗಾರರು, ಮೈಸೂರಿನ ಒಡೆಯರು, ಸ್ವತಂತ್ರರಾಗಿ ಕರ್ನಾಟಕದಲ್ಲಿ ತಮ್ಮ ಆಳ್ವಿಕೆಯನ್ನು ನಡೆಸಿದ್ದಾರೆ. ಈ ರೀತಿಯಾಗಿ ವಿಜಯನಗರ ಸಾಮ್ರಾಜ್ಯವು ಹರಿದು ಹಂಚಿ ಹೋಯಿತು. ಆದರೆ ಹಂಪಿಯಲ್ಲಿರುವ ಸ್ಮಾರಕಗಳು ಹಾಗೂ ನೈಸರ್ಗಿಕ, ಸಾಂಸ್ಕೃತಿಕ, ಶ್ರೀಮಂತಿಕೆಯಿಂದ ಹಂಪಿ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳು ಸಹ ಇದರಷ್ಟೇ ಶ್ರೀಮಂತಿಕೆಯಿಂದ ಕೂಡಿದ್ದು, ಇಂದಿಗೂ ಪ್ರತಿಷ್ಟೆ ಶ್ರೀಮಂತಿಕೆಯಿಂದ ಕೂಡಿದೆ. ಇಂದಿಗೂ ಪ್ರತಿಷ್ಟೆ ಅಲ್ಲಿನ ಪುರಾತನ ವೈಭವದ ಒಂದು ದಾರುಣ ಸ್ಮಾರಕವಾಗಿದೆ. ಅವುಗಳ ಪರಿಸರದ ವೈಶಿಷ್ಟವೇ ಒಂದು ಅಪರೂಪದ ಅನುಭವ ಇಲ್ಲಿನ ದೇವಾಲಯಗಳಲ್ಲಿ ಕಾಣಬರುವ ಶಿಲ್ಪ, ಸೌಂದರ್ಯ, ಕೋಟೆ, ಕೆತ್ತನೆಗಳ ಪ್ರಮಾಣ, ನಗರದ ನೀರು ಸರಬರಾಜು ವ್ಯವಸ್ಥೆ, ರಾಜರುಗಳು ಮತ್ತು ಕುಲೀನರ ನಿವಾಸ ಸ್ಥಾನಗಳು, ಪ್ರವಾಸಿಗರು ಕಣ್ಣಾರೆ ಕಂಡ ಊರಿನ ಪ್ರೇಕ್ಷಣೀಯ ದೃಶ್ಯಗಳು ಇವೆಲ್ಲವನ್ನು ನೆನಪಿಗೆ ತರುವ ಅವಶೇಷಗಳು ಹಂಪಿಯನ್ನು ರುದ್ರರಮಣೀಯ ಸ್ಥಳವನ್ನಾಗಿ ಮಾಡಿವೆ. ಸಂಯುಕ್ತ ರಾಷ್ಟ್ರದ ಸಾಂಸ್ಕೃತಿಕ ವಿಭಾಗವಾದ UNESCO ವಿಶ್ವ ಸಂಪ್ರದಾಯದ ಭವ್ಯ ಸ್ಮಾರಕಗಳಲ್ಲಿ ಹಂಪಿಗೂ ಒಂದು ಸ್ಥಾನವನ್ನು ಕೊಟ್ಟು ಗೌರವಿಸಿದೆ. ಆದರೆ ಇಂದು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಅವಧಿಯಲ್ಲಿರುವಷ್ಟು ವೈಭವ ಕಂಡು ಬರುವುದಿಲ್ಲ.

ಇಷ್ಟೆಲ್ಲಾ ಮಹತ್ವದ ಐತಿಹಾಸಿಕ ತಾಣವಾಗಿರುವ ಹಂಪಿಯ ಇನ್ನಷ್ಟು ವಿಷಯವನ್ನು ಹೊರತರುವುದು ಪ್ರಸ್ತುತ ಅದ್ಯಯನದ್ದಾಗಿದೆ. ಇಲ್ಲಿನ ಅವಶೇಷಗಳು, ಸ್ಮಾರಕಗಳು, ವಿನಾಶಕದ ಅಂಚಿಗೆ ಸರೆಯುತ್ತಿವೆ. ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಇನ್ನೂ ಕೆಲವು ಸ್ಥಳೀಯರ ಮೂಢನಂಬಿಕೆಗಳ ಆಹುತಿಯಾಗುತ್ತಿವೆ. ಅದನ್ನು ಸಂರಕ್ಷಿಸಿ ಕಾಪಾಡುವುದರೊಂದಿಗೆ ಮುಂದಿನ ಪೀಳಿಗೆಗೆ ಉಳಿಸುವಂತಹ ಕಾರ್ಯವು ಆಗಬೇಕಾಗಿದೆ.[೧]

ಈಗಿನ ಹಂಪಿಯು ಹಾಳುಬಿದ್ದಿರುವ ಒಂದು ಪುರಾತನ ಮಹಾನಗರ ಅದರ ಅವಶೇಷಗಳು ಅನೇಕ ಮತ್ತು ಬಹುವಿಧ ಈ ಅವಶೇಷಗಳಿಗೆ ಇಲ್ಲಿನ ಬೆಟ್ಟಗುಡ್ಡಗಳ ಪರಿಸರವೇ ಒಂದು ವೈಶಿಷ್ಟ್ಯ ಇಲ್ಲಿನ ಬೋಳು ಬಂಡೆಗಳ ವಿಚಿತ್ರ ಜೋಡಣೆಗಳನ್ನು ನೋಡಿದರೆ ಒಂದಾನೊಂದು ಕಾಲದಲ್ಲಿ ಹೆಗೋ, ಏಕೋ, ಬಾಹ್ಯಾಕಾಶದಿಂದ ಅಲೆಮಾನವ ಜೀವಿಗಳು ಬಂದು ನಲಿದು ಚೆಲ್ಲಾಟವಾಡಿ ತಮ್ಮ ಆಟಿಕೆಗಳನ್ನು ಬಿಟ್ಟುಹೋದಂತೆ ಭ್ರಮೆಯಾಗುತ್ತದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಎಂದೂ ಕಾಣದ ರಾಜಕೀಯ ವಿಪ್ಲವದ ದುರಂತಗಳನ್ನು, ದೌರ್ಜನ್ಯಗಳನ್ನು ಅನುಭವಿಸಿದ ಜನತೆ ತನ್ನ ಸ್ವಾತಂತ್ರ್ಯವನ್ನು, ಧರ್ಮಪರಂಪರೆಯನ್ನು ರಕ್ಷಿಸಿಕೊಂಡು ಬರಬೇಕೆಂಬ ಕ್ಷಾತ್ರ ಸಂಕಲ್ಪವನ್ನು ಕಾರ್ಯಗತ ಮಾಡಿದ ವೀರಭೂಮಿ ಇದು. ಕೇವಲ ಕರ್ನಾಟಕದಲ್ಲಿ ವಿಧರ್ಮೀಯರ ವೇಡಕ ಪ್ರಭುತ್ವವನ್ನು ಶೌರ್ಯದಿಂದ ಕೊನೆಗಾಣಿಸಿ ಸುಮಾರು ಎರಡೂವರೆ ಶತಮಾನಗಳವರೆಗೆ ಜನಸಾಮಾನ್ಯರಿಗೆ ಶಾಂತಿ ಸಂರಕ್ಷಣೆ ನೀಡಿದ ಕರ್ಮಭೂಮಿಯಾಗಿದೆ.

ಸುಮಾರು ಏಳು ಶತಮಾನಗಳ ಹಿಂದೆ ಬೆಟ್ಟಗುಡ್ಡ ಈ ಭೌಗೋಳಿಕ ಪರಿಸರದಲ್ಲಿ ಒಂದಾನೊಂದು ದಿನ ಉಜ್ವಲ ಸಾಮ್ರಾಜ್ಯ ವೈಭವದ ಕೇಂದ್ರವು ಅವತರಿಸಬಹುದೆಂಬ ಭಾವನೆ ಯಾರಿಗೂ ಸ್ವಪ್ನದಲ್ಲಿಯೂ ಹೊಳೆದಿರಲಾರದು. ಈ ಕಲ್ಲುಬಂಡೆಗಳು ಅನೇಕ ಶೌರ್ಯ ಪ್ರತಾಪ ಹಾಗೂ ತ್ಯಾಗದ ಘಟನೆಗಳನ್ನು ಪ್ರಕಾಶಪಡಿಸಿಯೂ ಇವೆ, ಮರೆಸಿಯೂ ಇವೆ. ಇಲ್ಲಿನ ಅವಶೇಷಗಳ ಎಪ್ಪತ್ತು ಕಿಲೋಮೀಟರ್ ಚೌಕದ ವ್ಯಾಪ್ತಿಯು ಈಗ ನಮ್ಮ ಪಾಲಿಗೆ ವಿಜಯನಗರದ ಒಂದು ಬೃಹತ್ ಸ್ಮಾರಕವಾಗಿ ಉಳಿದಿದೆ. ಈ ದುರ್ಗದ ವಾತಾವರಣದಲ್ಲಿ ಇತಿಹಾಸವು ಅಂಕುರಿಸಿ ಬೆಳೆದು ಬಹುಕಾಲ ರಾರಾಜಿನೆ ಕ್ಷಣ ಮಾತ್ರದಲ್ಲಿ ಬಲಿಯಾಯಿತು.

ಇಲ್ಲಿ ಕಾಣುವ ಅವಶೇಷಗಳಲ್ಲಿ ಪ್ರಮುಖವಾದವು ಯಾವುವೆಂದರೆ ಇಲ್ಲಿನ ಅಗಣಿತ ದೇವಾಲಯಗಳು ಈ ಕಲ್ಲು ಕಟ್ಟಡಗಳಲ್ಲಿ ಕೆಲವು ಕಿರಿದಾದವು, ಕೆಲವು ಸ್ವಲ್ಪ ದೊಡ್ಡವು ಮತ್ತು ಕೆಲವು ಬೃಹದಾಕಾರವು, ಶೈವ, ಶಾಕ್ತ, ವೈಷ್ಣವ ಮತ್ತು ಜೈನಧರ್ಮಗಳಿಗೆ ಸೇರಿದ ದೇವಾಲಯಗಳು ಎಲ್ಲಕ್ಕೂ ರಾಜರ ಸಮಾನ ಆಶ್ರಯವಿತ್ತು. ಕೆಲವು ದೇವಾಲಯಗಳಲ್ಲಿ ಕಂಡು ಬರುವ ಕೆತ್ತನೆಯ ಚಾತುರ್ಯ, ಹತ್ತಾರು ಟನ್ನುಗಳಷ್ಟು ತೂಕದ ಕಲ್ಲು ತೊಲೆಗಳು, ಕಂಭಗಳು, ಛಾವಣಿಗೆ ಹಾಸಿರುವ ಅಗಾಧವಾದ ಚಪ್ಪಡಿಗಳು ಇವುಗಳನ್ನು ಮೇಲೇರಿಸಿ ಸ್ಥಳೋಚಿತವಾಗಿ

ಜೋಡಿಸಲ್ಪಟ್ಟಿರುವ ಗಜಸಾಹಸ ಗುಡಿಯ ಸುತ್ತಲೂಕಟ್ಟಿರುವ ನೂರಾರು ಕಂಭಗಳ ವಸಾರೆ, ಪುಷ್ಕರಣಿಗಳು ಇವೆಲ್ಲವನ್ನು ನೋಡಿದರೆ ಈಗಿನ ಕಾಲದ ಕಟ್ಟಡ ಶಿಲ್ಪಿಗಳನ್ನೂ, ಚತುರ ಅಕ್ಕಸಾಲಿಗರ ಚಮತ್ಕಾರವನ್ನು ಹಂಗಿಸುವಂತಿದೆ. ಒಂದಾನೊಂದು ಕಾಲದಲ್ಲಿ ಸತತವಾಗಿ ಬೆಳಗುತ್ತಿದ್ದ ನಂದಾ ದೀಪಗಳನ್ನು ನೋಡುವುದಾದಲಿ, ಸುನಾದದಿಂದ ಮೊಳಗುತ್ತಿದ್ದ ಗಂಟೆ, ನಗಾರಿ, ನಾದಸ್ವರವೇ ಮೊದಲಾದ ವಾದ್ಯಸಮೂಹವನ್ನು ಕೇಳುವುದಾಗಲಿ ಈಗ ಸಾಧ್ಯವಿಲ್ಲ. ಆಗಿನ ಭಕ್ತಾದಿಗಳ ಸಂಭ್ರಮ, ಸಡಗರದ ಸ್ಥಾನದಲ್ಲಿ ಈಗ ಕುತೂಹಲ ಪ್ರೇರಿತರಾದ ಪ್ರವಾಸಿಗಳು ನಾನಾ ಕಡೆಗಳಿಂದ ಬಂದು ನೋಡಿಹೋಗುತ್ತಾರೆ, ಆಶ್ಚರ್ಯ ಪಡುತ್ತಾರೆ. ಇತರ ಅನೇಕ ಪುರಾತನ ರಾಜಧನಿಗಳಂತೆ ಹಂಪಿಯ ಐತಿಹ್ಯವೂ ಅಭಿನ್ನವಾಗಿ ಅಂಗವಾಗಿ ಕಾಣ್ಮರೆಯಾಯಿತಲ್ಲ ಎಂದು ಕೆಲವರು ನಿಟ್ಟುಸಿರು ಬಿಡುವುದೂ ಉಂಟು. ಭೀಕರ ದುರಂತಕ್ಕೆ ಸಿಕ್ಕಿ ನುಚ್ಚುನೂರಾಗಿದ್ದರೂ ಈ ನಗರದ ಅವಶೇಷಗಳೂ ಅವುಗಳ ಪರಿಸರ ವೈಶಿಷ್ಟ್ಯವೂ ಜನರ ಮನಸ್ಸನ್ನು ಇನ್ನೂ ಆಕರ್ಷಿಸುತ್ತಲೇ ಇವೆ. ಹೊರ ದೇಶದಗಳಿಂದ ಬಂದ ಆಗಿನ ಪ್ರಖ್ಯಾತ ಪ್ರವಾಸಿಗಳು ಇಬನ್ ಬತೂತ, ಬರಾನಿ, ನಿಕೋಲೊಕಾಂಟೆ, ಅಬ್ದುಲ್‌ರಜಾಕ್, ಫೆರಿ, ಡಾಮಿಂಗೋ ಪೇರಿಯಸ್. ಫರನಾ ಓನ್ಯೂನಿಜ್, ಬರ್ಬೋಸಾ ಇವೇ ಮೊದಲಾದವರು ತಾವು ಕಂಡು ಕೇಳಿದ ವಿಜಯನಗರದ ವೈಭವವನ್ನು ಅದರ ಹಿರಿಮೆಯನ್ನು ತಮ್ಮ ವರದಿಗಳಲ್ಲಿ ಸ್ವಾರಸ್ಯವಾಗಿಯೂ ವರ್ಣರಂಜಿತವಾಗಿಯೂ ಆಗಾಗ್ಗೆ ಉತ್ಪ್ರೇಕ್ಷೆಯಿಂದಲೂ ಉಲ್ಲೇಖಿಸಿದ್ದಾರೆ.

ಇಲ್ಲಿಯ ದುರ್ಗಮ ಕೋಟೆಗಳು, ದೇಶ ವಿದೇಶಗಳಿಂದ ತುಂಬಿ ತುಳುಕುವ ಅಂಗಡಿ ಸಾಲುಗಳು, ಹಂಪಿಯ ರಸ್ತೆಯ ಬದಿಯಲ್ಲಿ ತರಕಾರಿಗಳನ್ನು ಮಾರುವ ತೆರದಲ್ಲಿ ಸ್ವರ್ಣಕಾರ ವರ್ತಕರು ಚಿನ್ನ, ವಜ್ರ, ವೈಡೂರ್ಯ, ಪಟ್ಟೆ ಮತ್ತು ಮುತ್ತುಗಳನ್ನು ನಿಭಯವಾಗಿ ಮಾರಾಟ ಮಾಡುವ ದೃಶ್ಯಗಳು, ಬೀದಿಗಳಲ್ಲಿ ಲೆಕ್ಕವಿಲ್ಲದೆ ಓಡಾಡುವ ಜನಸಂದಣಿ ಇವೆಲ್ಲವುಗಳು ವಿಜಯನಗರದ ವೈಭವಯುತವಾಗಿ ಕಂಡುಬರುತ್ತಿತ್ತು. ಪ್ರಸ್ತುತವಾಗಿ ಈ ಸ್ಥಳದಲ್ಲಿ ಭಗ್ನ ವ್ಯವಸ್ಥೆಯಲ್ಲಿರುವುದು ಕಂಡುಬರುತ್ತದೆ.[೨]

ಆ ಕಾಲದ ಸಾಹಿತ್ಯದಿಂದ ಪರೋಕ್ಷವಾಗಿ ತಿಳಿದುಬರುವ ಕುಟುಂಬ ಮತ್ತು ಸಮಾಜ ಜೀವನದ ಹತ್ತಾರು ಸುಮುಖ ಮತ್ತು ವಿಮುಖ ಚಿತ್ರಪಟಗಳ ಅಂದಿನ ಸಮಕಾಲೀನ ಶ್ರೀಮಂತಿಕೆಯನ್ನು ಜನಜೀವನದಲ್ಲಿ ಕಂಡುಬಂದ ಗುಣದೋಷಗಳನ್ನು ಆಳವಾಗಿ ಬೇರೂರಿದ ನಿಷ್ಕಪಟ ನಂಬಿಕೆ, ಮಡಿವಂತಿಕೆ, ಅಂತೆಯೇ ವೇಶ್ಯಾವೃತ್ತಿ, ಗುಲಾಮಗಿರಿ, ಬಲಿದಾನಗಳು, ಸಹಗಮನ ಇಂತಹ ವಿಕೃತ ಪದ್ಧತಿಗಳನ್ನು ಎತ್ತಿತೋರಿಸುತ್ತದೆ. ಊರು ಮುರಿದುಬಿದ್ದಿದ್ದರೂ ಹಂಪಿಯ ಗತವೈಭವದ ಮುದ್ರಿಕೆಗಳು ಭಾರತದ ಚಾರಿತ್ರಿಕ ಪರಂಪರೆಗೆ ಅಚ್ಚಳಿಯದ ಕೊಡುಗೆಗಳಾಗಿ ಉಳಿದಿವೆ. ಪ್ರಪಂಚದ ಇತರ ಅನೇಕ ಪ್ರಸಿದ್ಧ ಅವಶೇಷಗಳ ಜೊತೆಯಲ್ಲಿ ಹಂಪಿಯೂ ಸಹ

ವಿಶ್ವಸಂಸ್ಕೃತಿಗೆ ಸೇರಿರುವವ ಅವಿಚ್ಛಿನ್ನ ಭಾಗವೆಂದು ಸಂಯುಕ್ತ ರಾಷ್ಟ್ರದ ಸಾಂಸ್ಕೃತಿಕ ಸಂಸ್ಥೆಯಿಂದ (UNESCO) ಮಾನ್ಯತೆ ಪಡೆದಿರುವುದು ಆಶ್ಚರ್ಯವೇನಿಲ್ಲ. ಹಂಪಿಯು ಸಾಂಸ್ಕೃತಿಕ ಮತ್ತು ಪ್ರಾಕೃತಿಕ ಸ್ಥಳವಾಗಿದ್ದು, ವಿಶಿಷ್ಟ ಹಾಗೂ ವಿಶ್ವಮಾನ್ಯವಾದ ಸ್ಮಾರಕಗಳ ಸ್ಥವೆಂದು ಯುನೆಸ್ಕೋ ತನ್ನ ೧೯೭೨ರ ಅಧಿವೇಶನದಲ್ಲಿ ವಿಶ್ವಮಾನ್ಯವಾದ ಸ್ಮಾರಕ ಸ್ಥಳಗಳನ್ನು ಗುರುತಿಸಿ ಅವುಗಳ ರಕ್ಷಣೆ ಇಡಿ ಮನುಕುಲಕ್ಕೆ ಸೇರಿದ್ದು ಎಂದು ಸಾರಿತು. ಅಲ್ಲದೆ ಪರಸ್ಪರ ಸೌಹಾರ್ದಯುತ ಪರಿಸರದಲ್ಲಿ ಅವುಗಳ ರಕ್ಷಣೆ, ಸಂರಕ್ಷಣೆ ಮಾಡುವುದರ ಜೊತೆಗೆ ಇಂತಹ ಸಂಪತ್ತನ್ನು ಯಥಾಸ್ಥಿತಿಯಲ್ಲಿ ಮುಂದಿನ ಜನಾಂಗಕ್ಕೆ ಕೊಡುಗೆಯಾಗಿ ನೀಡಬೇಕಾಗಿದೆ. ಅಲ್ಲದೆ ವಿಶ್ವಪರಂಪರೆ ಸ್ಥಳಗಳೆಂದು ಘೋಷಿಸಬೇಕೆಂದು ಸಭೆಯಲ್ಲಿ ನಿರ್ಣಯಿಸಿ ೧೯೭೨ರ ಯುನೆಸ್ಕೋ ಅಧಿವೇಶನದಲ್ಲಿ ಅಂಗೀಕಾರವಾದಾಗಿನಿಂದ ವಿಶ್ವದ ಅನೇಕ ಸ್ಮಾರಕ/ತಾಣಗಳ ಪಟ್ಟಿ ಮಾಡಲಾಯಿತು. ಇದರ ದೆಸೆಯಿಂದಾಗಿ ಸುಮಾರು ೨೨೮ ಸ್ಮಾರಕಗಳನ್ನು ಹಾಗೂ ನೈಸರ್ಗಿಕ ತಾಣಗಳನ್ನು ಗುರುತಿಸಿ ಅವುಗಳ ರಕ್ಷಣೆಯ ಹೊಣೆಯನ್ನು ಸದಸ್ಯ ರಾಷ್ಟ್ರಗಳ ಜವಾಬ್ದಾರಿಗೆ ವಹಿಸಲಾಯಿತು. ಇಂತಹ ಸ್ಮಾರಕ ಅಥವಾ ಸ್ಥಳಗಳನ್ನು "ವರ್ಲ್ಡ್ ಹೆರಿಟೇಜ್ ಮಾನ್ಯುಮೆಂಟ್ಸ್ ಅಂಡ್ ಸೈಟ್ಸ್" ಎಂದು ಕರೆಯಲಾಯಿತು.

ಹಂಪಿಯಲ್ಲಿ ಸಂರಕ್ಷಿತ ಪ್ರದೇಶಗಳು ಮತ್ತು ಒಟ್ಟಾರೆ ಕ್ಷೇತ್ರಗಳನ್ನು ಗುರುತಿಸಿಲ್ಲ ಹಂಪಿಯ ಮುಖ್ಯವಾದ ಸ್ಮಾರಕಗಳು ೨೫ ಚದರ ಕಿಲೋಮೀಟರ್ ಇದ್ದು, ಗಡಿರೇಖೆಗಳನ್ನು ಗುರುತಿಸಬೇಕು. ಹಂಪಿಯ ಪರಿಸರದಲ್ಲಿ ಬರುವ ಅನೇಕ ಗ್ರಾಮಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಅನೇಕ ಕಟ್ಟಡಗಳು ತಲೆ ಎತ್ತುತ್ತಿವೆ. ಅಂತಹ ಬಹುಮಹಡಿಯ ಕಟ್ಟಡಗಳನ್ನು ತಡೆಯಬೇಕು, ಹಂಪಿ ಪರಿಸರಕ್ಕೆ ಹೊಂದಿಕೆಯಾಗುವ ರೀತಿ ಕಟ್ಟಗಳ ನಿರ್ಮಾಣದ ಕಡೆಗೆ ಗಮನ ನೀಡಬೇಕು, ಹಂಪೆಯ ವೀಕ್ಷಣೆಗೆ ದೇಶಿ ಮತ್ತು ವಿದೇಶಿ ಪ್ರವಾಸಿಗರು ನಿರಂತರವಾಗಿ ಬರುತ್ತಿದ್ದು ಮೂಲಭೂತ ಸೌಕರ್ಯಗಳನ್ನು ಪೂರೈಸುವುದರ ಬಗೆಗೆ ಹಾಗೂ ಅಭಿವೃದ್ಧಿ ಪಡಿಸುವ ಬಗೆಗೆ ಗಮನಹರಿಸಬೇಕಾಗಿದೆ.[೩]

ವಿಜಯನಗರ ಅರಸರು ಹಂಪಿಯನ್ನು ತಮ್ಮ ಸಾಮ್ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ ೧೩೩೬ ರಿಂದ ೧೫೬೫ರ ಸುಧೀರ್ಘ ಅವಧಿಯವರೆಗೆ ಆಳ್ವಿಕೆಯನ್ನು ಮಾಡಿದರು. ಹರಿಹರ-ಬುಕ್ಕರಿಂದ ಆರಂಭವಾಗಿ ಕೃಷ್ಣದೇವರಾಯನ ಕಾಲಕ್ಕೆ ಉಚ್ಛ್ರಾಯ ಸ್ಥಿತಿಯನ್ನು ತಲುಪಿ, ರಾಮರಾಯನ ಅವಧಿಯಲ್ಲಿ ಅವನತಿಯನ್ನು ಹೊಂದಿತು. ಈ ಅವನತಿಗೆ ರಾಮರಾಯನ ಧೋರಣೆಯೇ ಕಾರಣವೆಂದು ಅನೇಕ ವಿದ್ವಾಂಸರು ಗುರುತಿಸಿದ್ದಾರೆ. ಕೃಷ್ಣನದಿಯ ಉತ್ತರದ ಬಹುಬಾಗ ಪ್ರವೇಶವನ್ನು ಸುಲ್ತಾನರು ಹಿಡಿದು ಕೊಳ್ಳುವಲ್ಲಿ ಯಶಸ್ವಿಯಾದರು ವಿಜಯನಗರ ಸಾಮ್ರಾಜ್ಯ ಕೃಷ್ಣನದಿಯ ದಕ್ಷಿಣಭಾಗದ ಕರ್ನಾಟಕ, ಆಂದ್ರಪ್ರದೇಶ ಹಾಗೂ

ತಮಿಳುನಾಡಿನ ಕೆಲವು ಭಾಗಗಳನ್ನೊಳಗೊಂಡಂತೆ ವಿಸ್ತಾರವನ್ನು ಪಡೆದುಕೊಂಡಿತ್ತು. ಸಾಮ್ರಾಜ್ಯದ ವಿಸ್ತರಣೆ, ಆಡಳಿತದ ಧೋರಣೆಗಳಿಂದಾಗಿ ಸುಲ್ತಾನರ ಹಾಗೂ ವಿಜಯನಗರ ಅರಸರ ಮಧ್ಯೆ ಪದೆ ಪದೆ ಯುದ್ಧಗಳು ನಡೆಯುತ್ತಿದ್ದವು. ಕ್ರಿ.ಶ. ೧೫೧೮ರ ನಂತರ ಬಹುಮನಿ ಸಾಮ್ರಾಜ್ಯ ಐದು ಸ್ವತಂತ್ರರಾಜ್ಯಗಳಾಗಿ ವಿಭಾಗವಾಯಿತು. ಆಗ ಅಹಮ್ಮದ್ ನಗರದ ನಿಝಾಂಶಾಹಿ, ವಿಜಾಪುರದ ಆಲಿಆದಿಲ್‌ಶಾಹಿ, ಗೋಲ್ಕೊಂಡದ ಕುತುಬಶಾಹಿ ಹಾಗೂ ಬೀದರದ ಆಲಿಬರೀದ್‌ಶಾಹಿ ಇವರೆಲ್ಲರೂ ಸಾಮ್ರಾಜ್ಯವನ್ನು ವಿಸ್ತರಿಸುವ ಆಕಾಂಕ್ಷೆಯಿಂದ ತಮ್ಮ ತಮ್ಮಲ್ಲಿಯೇ ಪೈಪೋಟಿಗಿಳಿದರು. ಬಹುಸಂಖ್ಯಾಬಲದ ಸೈನ್ಯವನ್ನು ಹೊಂದಿದ ವಿಜಯನಗರ ದೊಂದಿಗೆ ಸ್ನೇಹ ಅನಿವಾರ್ಯವಾಗಿತ್ತು. ಈ ಅವಕಾಶವನ್ನು ಬಳಸಿಕೊಂಡ ರಾಮರಾಯ ಒಬ್ಬರ ನಂತರ ಇನ್ನೊಬ್ಬರನ್ನು ಎತ್ತಿಕಟ್ಟುವ ಆಡಳಿತ ತಂತ್ರವನ್ನು ಬಳಸಿಕೊಂಡನು ಇದರಿಂದ ಮುಕ್ತಿ ಇಲ್ಲವೆಂಬುದನ್ನು ಅರಿತುಕೊಂಡ ಸುಲ್ತಾನರು ವಿಜಯನಗರ ಸಾಮ್ರಾಜ್ಯವನ್ನು ಕಬಳಿಸಿದರೆ ಬಹುವಿಸ್ತಾರ ಪ್ರದೇಶವನ್ನು ಹಿಡಿದುಕೊಳ್ಳಬಹುದೆಂಬುದನ್ನು ಅರಿತುಕೊಂಡರು. ಇದರಿಂದ ಎಲ್ಲರೂ ಒಟ್ಟುಗೂಡಿ ವಿಜಯನಗರದ ವಿರುದ್ಧ ಯುದ್ಧಮಾಡಿ ಯಶಸ್ವಿಯಾದರು.

ಶಾಹಿಸುಲ್ತಾನರ ಹಾಗೂ ವಿಜಯನಗರದ ಮಧ್ಯೆ ನಡೆದ ಯುದ್ಧ ಸ್ಥಳ ನಿರ್ಣಯದಲ್ಲಿ ಅನೇಕ ಗೊಂದಲಗಳುಂಟಾಗಿವೆ. ಈ ಕುರಿತು ಇತಿಹಾಸಕಾರರು ವಿಭಿನ್ನ ಅಭಿಪ್ರಾಯಗಳನ್ನು ನೀಡಿದ್ದಾರೆ. ಸುಲ್ತಾನರ ಚರಿತ್ರೆಯ ಒಳಿತು ಚೆಲ್ಲುವ "ಬಸಾತಿನೆ-ಸಲಾತೀನ" ಗ್ರಂಥ ಒಂದು ಬಗೆಯ ಮಾಹಿತಿಯನ್ನು ಒದಗಿಸಿದರೆ. ಸ್ಥಳೀಯರ ಹೇಳಿಕೆಗಳು ಇನ್ನೊಂದು ಬಗೆಯಲ್ಲಿವೆ. ಅಲ್ಲದೆ ವಿದ್ವಾಂಸರು ನೀಡಿರುವ ವಿಭಿನ್ನ ಹೇಳಿಕೆಗಳನ್ನು ಕಾಣಬಹುದು. ಇವೆಲ್ಲವುಗಳನ್ನು ಒಟ್ಟುಗೂಡಿಸಿ ಚರ್ಚಿಸಿ ನಿರ್ಧಿಷ್ಟ ಸ್ಥಳಗಳನ್ನು ಗೊತ್ತುಪಡಿಸಲು ಅವಕಾಶವಿದೆ.

೧. **೧೫೬೭ರಲ್ಲಿ "ಸಿಜಾರೋ ಫೆಡ್ರಿಕ್"** ಎಂಬ ಇಟಲಿಯ ಪ್ರವಾಸಿ ಹಂಪಿಗೆ ಭೇಟಿ ನೀಡಿದ್ದ. ಆತ ಹೇಳುವಂತೆ ಪೂರ್ತಿ ವಿಧ್ವಂಸಕ ಕೃತ್ಯ ನಡೆಸಿ ಮಹಮ್ಮದ್ದೀಯ ಸೇನೆಗಳು ಹಿಂದಿರುಗಿದ ಮೇಲೆ ತಿರುಮಲ ಮತ್ತೊಮ್ಮೆ ವಿಜಯನಗರಕ್ಕೆ ಜನರು ಬಂದು ನೆಲೆಸುವಂತೆ ಮಾಡಲು ಯತ್ನಿಸಿದರಂತೆ ಆದರೆ ವಿನಾಶ ಅದಷ್ಟು ಭಯಾನಕವಾಗಿತ್ತೆಂದರೆ ಜನರು ಅಲ್ಲಿಗೆ ಬಂದು ವಾಸಿಸಲುಯ ತಯಾರಾಗಲೇ ಇಲ್ಲ ಕೇವಲ ಕೆಲವೇ ದಿನಗಳ ಹಿಂದಿನವರೆಗೆ ಎಲ್ಲರಿಗೂ ಬೇಕಾಗಿದ್ದ, ಎಲ್ಲರೂ ಬಂದು ನೆಲೆಸಲು ಇಷ್ಟಪಡುತ್ತಿದ್ದ ವಿಜಯನಗರದ ಹಂಪಿ ಇಂದು ಯಾರಿಗೂ ಬೇಡವಾಗಿತ್ತು. ವಿಜಯ ನಗರದಲ್ಲಿ ಓಡಾಡಿದ ನಂತರ ಆತ ಹೀಗೆ ಹೇಳಿದ್ದಾನೆ. ವಿಜಯನಗರ ಪೂರ್ತಿ ನಾಶವಾಗಿದ್ದರೂ, ಇನ್ನೂ ಅನೇಕ ಮನೆಗಳು ಅಲ್ಲಲ್ಲಿ ತಟಸ್ಥವಾಗಿ ನಿಂತಿವೆ. ಅಲ್ಲೀಗ ಹುಲಿ, ಕರಡಿಯಂತಹ ವನ್ಯಮೃಗಗಳ ಹೊರತಾಗಿ ಬೇರೇನೂ ವಾಸಿಸುತ್ತಿಲ್ಲ ಎಂದಿದ್ದಾನೆ. ಕೇವಲ ಎರಡು ವರ್ಷದಲ್ಲಿ ವಿಜಯನಗರ ವನ್ಯಮೃಗಗಳು ಬಂದು ನೆಲೆಸುವ ಹಾಳು ಹಂಪಿಯಾಗಿ ಹೋಯಿತು.

ಈ ಅಭಿಪ್ರಾಯ ಹೊಡೆತದಿಂದ ವಿಜಯನಗರ ಮತ್ತೆಂದೂ ಚೇತರಿಸಿಕೊಳ್ಳಲೇ ಇಲ್ಲ ಅನೇಕ ವರ್ಷಗಳವರೆಗೆ ಇದು ಕಲ್ಲು, ಮುಳ್ಳು, ವನ್ಯಜೀವಿಗಳಿಂದ ತುಂಬಿದ ಹಾಳು ಹಂಪೆಯಾಗಿ ಉಳಿದು ಹೋಯಿತು. ಇಂದಿಗೂ ಇಲ್ಲಿ ನಾಶವಾದ ಅನೇಕ ದೇವಸ್ಥಾನಗಳನ್ನು ನಡೆದ ವಿಧ್ವಂಸಕ ಕೃತ್ಯಗಳ ಕುರುಹುಗಳನ್ನು ನೋಡಬಹುದು. ಸುಮಾರು ೨೦ ಕಿ.ಮೀ. ವ್ಯಾಪ್ತಿಯಲ್ಲಿ ಈ ಎಲ್ಲಾ ಸ್ಮಾರಕಗಳು, ದೇವಸ್ಥಾನಗಳು ಹರಡಿಹೋಗಿವೆ. ಎಲ್ಲಾ ದೇವಸ್ಥಾನಗಳ ಮುಂದೆಯೂ ಒಡೆದ ಮೂರ್ತಿಗಳು, ಕಂಬಗಳು, ಗೋಪುರಗಳನ್ನು ನೋಡಬಹುದು. ಎಷ್ಟೋ ಕಡೆ ಹೊಲಗಳ ನಡುವೆ ದೇವಸ್ಥಾನಗಳು, ಶಿಥಿಲ ಕಟ್ಟಡಗಳು ಇಂದಿಗೂ ನಿಂತಿವೆ. ಅವುಗಳ ಸುತ್ತ ರೈತರು ಕೃಷಿ ನಡೆಸುತ್ತಿದ್ದಾರೆ. ಅನೇಕ ಕಡೆ ಇಂತಹ ಶಿಥಿಲ ಕಟ್ಟಡಗಳ ಮೇಲೆ ಗಿಡಬಳ್ಳಿಗಳು ಬೆಳೆದುಹೋಗಿವೆ. ಹಿಂದೆ ನೀರು ಸರಬರಾಜು ಮಾಡುತ್ತಿದ್ದ ಕಲುವೆಗಳು ಇಂದಿಗೂ ಇವೆ. ಇಂದು ಹಾಳಾಗಿ ಬಿದ್ದಿರುವ ಹಂಪಿಯೇ ಇಷ್ಟು ದೊಡ್ಡದಿರಬೇಕಾದರೆ ಲಕ್ಷಾಂತರ ಜನರಿಂದ ತುಂಬಿ ತುಳುಕಿತ್ತಿದ್ದ ಸುವರ್ಣ ಸಾಮ್ರಾಜ್ಯದ ಹಂಪಿ ತನ್ನ ಉತ್ತಾಂಗದಲ್ಲಿ ಹೇಗಿರಬೇಡ?

ವಿಜಯನಗರ ಪತನವಾದ ಮೇಲೆ ಪೋರ್ಚುಗೀಸರ ಮೇಲೂ ಪರಿಣಾಮ ಬೀರಿತು. ಫ್ರೆಡ್ರಿಕ್ ಹೇಳುವ ಪ್ರಕಾರ "ಗೋವಾದಿಂದ ಪೋರ್ಚುಗೀಸರ ಮೂಲಕ ಕುದುರೆಗಳು ಮುಖಬುಲ್‌ಬಟ್ಟೆ, ಚಿತ್ರನೆಯ್ದ ಬಟ್ಟೆ, ಸ್ಯಾಟಿನ್, ಪೋರ್ಚುಗಲ್‌ನ ಅರ್ಮೆನೆನ್, ಚೀನಾದ ಪಿಂಗಾಣಿ ವಸ್ತುಗಳು, ಕೇಸರಿಗಳು ಹೋಗುತ್ತಿದ್ದವು. ಆಭರಣಗಳು, ಬಂಗಾರ ಇತ್ಯಾದಿಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ವಿಜಯನಗರದ ಪತನದ ಜೊತೆಗೆ ಈ ವ್ಯಾಪಾರ ವಹಿವಾಟು ಸಾಕಷ್ಟು ಕಡಿಮೆಯಾಯಿತು. ಖರೀದಿಸುವವರೇ ಇಲ್ಲದೆ ಪೋರ್ಚುಗೀಸರು ನಷ್ಟ ಅನುಭವಿಸುವ ಪರಿಸ್ಥಿತಿ ನಿರ್ಮಾಣವಾಯಿತು.

ಈ ರೀತಿ ವ್ಯಾಪಾರ ವಹಿವಾಟು ಕುಸಿತ ಕಂಡದ್ದನ್ನು ೧೫೭೮-೧೫೮೮ರ ವರೆಗೆ ಭಾರತದಲ್ಲಿದ್ದ ಸ್ಯಾಸೆಟಿ ದೃಢಕರಿಸುತ್ತಾನೆ. ವಿಜಯನಗರದ ಸರಕು ಸಾಗಾಟ ಅಪಾರ ಪ್ರಮಾಣದಲ್ಲಿತ್ತು. ಎಷ್ಟೊಂದು ಊಹಿಸಿಕೊಳ್ಳುವುದು ಕಷ್ಟ ಇಲ್ಲಿಯ ಜನರು ಶ್ರೀಮಂತರಾಗಿದ್ದು, ಬಲು ದೊಡ್ಡ ಊರಾಗಿತ್ತು. ಆದರೆ ಪತನದ ನಂತರ ವ್ಯಾಪಾರ ವಹಿವಾಟು ಕಡಿಮೆಯಾಯಿತು. ಎಷ್ಟೆಂದರೆ ಕುದುರೆ ವ್ಯಾಪಾರವೊಂದರಿಂದಲೂ ಆಗುತ್ತಿದ್ದ ಸುಮಾರು ೧೨೦ ರಿಂದ ೧೫೦ ಸಾವಿರ ಡುಕಟ್‌ಗಳ ಲಾಭ ಈಗ ಕೇವಲ ಅಸಾವಿರಕ್ಕೆ ಇಳಿದಿದೆ.

ಕೌಟೋ ಸಹ ಅದೇ ಕಥೆ ಹೇಳುತ್ತಾರೆ. ವಿಜಯನಗರದ ಸರ್ವನಾಶ ಇಡೀ ಭಾರತದ ಮೇಲೆ ಹಾಗೂ ನಮ್ಮ ದೇಶದ ಮೇಲೂ ಸಾಕಷ್ಟು ಪರಿಣಾಮ ಬೀರಿತು. ಎಲ್ಲರೂ ತಲ್ಲಣಗೊಂಡಿದ್ದರು. ಎಲ್ಲರೂ ವಿಜಯನಗರದ ಸಲುವಾಗಿ ವ್ಯಾಪಾರ ಆರಂಭಿಸಿದ್ದರು. ವಿವಿಧ ಸರಕುಗಳನ್ನು ತಂದು ಲಾಭಕ್ಕೆ ಮಾರುತ್ತಿದ್ದರು."

ಇವನ ಕಾಲದಲ್ಲಿ ಸಿಂಹಾಸನಕ್ಕಾಗಿ ಅಂತಃಕಲಹವುಂಟಾಗಿ ಅವನ ಭಾವಮೈದ ಜೋಗರಾಯನು ಅಧಿಕಾರಗ್ರಣ ಮಾಡಿದನು. ಆದರೆ ಮೇಲುಯಕೋಟೆಯ ಎಚ್ಚೆಮನಾಯಕ ಜೋಗರಾಯನನ್ನು ಸೋಲಿಸಿ ಶ್ರೀರಂಗನ ಮಗ ಕಾಮದೇವನನ್ನು ಅಧಿಕಾರಕ್ಕೆ ತಂದನು. (೧೬೧೭) ಅನಂತರ ೩ನೇ ವೆಂಕಟ, ಅನಂತರ ೧೬೪೨ರಲ್ಲಿ ೩ನೇ ಶ್ರೀರಂಗರಾಯರು ಆಳಿದರು. ೩ನೇ ಶ್ರೀರಂಗರಾಯನು ವಿಜಯನಗರದ ಕೊನೆಯ ಅರಸ ಅವನು ಗೋಲ್ಕೊಂಡ ಸುಲ್ತಾನ ಮತ್ತು ಬಿಜಾಪುರ ಸುಲ್ತಾನನ ಕೈಯಲ್ಲಿ ಸೋತು ರಾಜ್ಯ ಕಳೆದುಕೊಂಡು ದೇಶಭ್ರಮನಾಗಿ ಅಲೆಯುತ್ತಿದ್ದಾಗ ಕೆಳದಿಯ ಶಿವಪ್ಪನಾಯಕ ಅವನಿಗೆ ಆಶ್ರಯ ಕೊಟ್ಟನು. ಶ್ರೀರಂಗನು ೧೬೮೧ರಲ್ಲಿ ನಿಧನನಾದಾಗ ವಿಜಯನಗರದ ಅವಸಾನವು ಪೂರ್ಣಗೊಂಡಿತು. ಅರವೀಡು ವಂಶದ ರಾಜರು ವಿಜಯನಗರ ಸಾಮ್ರಾಜ್ಯದ ವೈಭವವನ್ನು ಪುನರುಜ್ಜೀವನ ಗೊಳಿಸಲು ವಿಫಲರಾದರೂ ಕರ್ನಾಟಕ ಸಾಮ್ರಾಜ್ಯವನ್ನು ಉಳಿಸಿಕೊಳ್ಳಲು ಶ್ರಮಿಸಿದರು.

ಹಂಪಿ ವಿಜಯನಗರ ಸಾಮ್ರಾಜ್ಯವನ್ನು ಕುರಿತಂತೆ ಕಳೆದ ಶತಮಾನದ ಆರಂಭದಿಂದಲೂ ಅಧ್ಯಯನಗಳು ನಡೆಯುತ್ತ ಬಂದಿವೆ. ಈ ಅಧ್ಯಯನಗಳು ವಿವಿಧ ಆಶಯಗಳ ಹಿನ್ನೆಯಲ್ಲಿ ನಡೆದಿವೆ. ಅಂದರೆ ವಿಜಯನಗರ ಇತಿಹಾಸ ರಚನೆಯಲ್ಲಿ ವಸಾಹತುಶಾಹಿ,ರಾಮ್ರೋಯವಾದಿ ಮತ್ತು ಕೋಮುವಾದಿ ದೃಷ್ಟಿಕೋನಗಳನ್ನು ಗುರುತಿಸಲಾಗಿದೆ. ಬರ್ಟನ್ಸ್ಟೇನ್ ಮತ್ತು ನೊಬರು ಕರಾಶಿಮ ಅವರ ವಿಚಾರಗಳು ವಿಜಯನಗರದ ರಾಜ್ಯ ವ್ಯವಸ್ಥೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಕುರಿತಂತೆ ಮಹತ್ವದ ಬೆಳಕನ್ನು ಚೆಲ್ಲುತ್ತವೆ. ಹಂಪಿಯಲ್ಲಿ ಪ್ರತಿವರ್ಷ ನಡೆಯುತ್ತಿರುವ ಪುರಾತತ್ವ, ಉತ್ಖನನ, ಅನ್ವೇಷಣೆ, ವಿಚಾರ ಸಂಕಿರಣ ಮತ್ತಿತರ ಕಾರ್ಯಚಟುವಟಿಕೆಗಳಿಂದಾಗಿ ಹಂಪೆ–ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದಂತೆ ಹೊಸ ಹೊಸ ವಿಚಾರಗಳು ಸೇರ್ಪಡೆಗೊಳ್ಳುತ್ತಿವೆ. ರಾಜ್ಯ ಪುರಾತತ್ವ ಇಲಾಖೆಯು ಪ್ರತಿವರ್ಷ ಹಂಪಿ ಉತ್ಸವದ ಸಂದರ್ಭದಲ್ಲಿ ವಿಚಾರ ಸಂಕಿರಣ ನಡೆಸಿ 'ವಿಜಯನಗರ ಅಧ್ಯಯನ' ಎಂಬ ಸಂಪುಟಗಳನ್ನು ಪ್ರಕಟಿಸುತ್ತಿದೆ. ಇದರಿಂದಾಗಿ ಪ್ರಸ್ತುತ ಅಧ್ಯನದಲ್ಲಿ ಗರುತಿಸುವುದಾಗಿದೆ.

ಹಂಪಿಯ ಸನ್ನಿಹದಲ್ಲಿ ಅಂದರೆ ತಳವಾರ ಘಟ್ಟ ಹಾಗೂ ಆನೆಗುಂದಿಯ ಸೇತುವೆಗಳು ಸೌಂದರ್ಯಕ್ಕೆ ಪೂರಕವಾಗಿರುವುದರಿಂದ ಅದನ್ನು ಗಮನಿಸಿದ ಯುನೆಸ್ಕೋ ಆಕ್ಷೇಪಣೆ ಮಾಡಿದ್ದರಿಂದ ಸದರಿ ಸಿಮೆಂಟ್‌ನ ಜೋಡಿ ಕಂಬಗಳನ್ನು ಇತ್ತೀಚೆಗೆ ನಾಶಪಡಿಸಿ ಅದನ್ನು ಬೇರೆಕಡೆಯಲ್ಲಿ ನಿರ್ಮಿಸಲಾಗಿದೆ.[೫]

ಹಂಪಿಯ ಪರಿಸರದಲ್ಲಿ ತುಂಗಭದ್ರಾ ನದಿಯ ಎಡದಂಡೆಯಲ್ಲಿರುವ ವಿರೂಪಾಪುರ ಗಡ್ಡೆಯಲ್ಲೂ ಅನೇಕ ಆಧುನಿಕ ಶೈಲಿಯ ಕಟ್ಟಡಗಳನ್ನು ವ್ಯಾಪಾರಿ ಮಳಿಗೆಗಳು, ಹೋಟೆಲ್, ಡಾಬಾ, ಅಂಗಡಿ ಮುಂಗಟ್ಟುಗಳಿಂದ ಇಡೀ ಪ್ರದೇಶವನ್ನು ವಿಲೀನಮಾಡಲಾಗಿದೆ. ಹಾಗೂ

ವ್ಯವಸ್ಥಿತ ರೀತಿಯಲ್ಲಿ ಹಂಪಿ ಪ್ರದೇಶವನ್ನು ಅಭಿವೃದ್ಧಿ ಪಡಿಸಲಾಗಿದೆ. ಹಂಪಿಯ ಚಾರಿತ್ರಿಕ, ಪಾರಂಪರಿಕ ಹಾಗೂ ಪ್ರಾಕೃತಿಕ ಸಂಪತ್ತು ಕೊಳ್ಳೆ ಹೋಗದಂತೆ ಕ್ರಮತೆಗೆದುಕೊಳ್ಳಬೇಕಾಗಿದೆ. ಅಭಿವೃದ್ಧಿ ಹಾಗೂ ಪ್ರಾವಾಸೋದ್ಯಮವಾದ ಹೆಸರಿನಲ್ಲಿ ಅನೇಕ ಕಾರ್ಯಗಳನ್ನು ಮಾಡಲಾಗುತ್ತಿದೆ.

ಕರ್ನಾಟಕ ರಾಜ್ಯದ ಮಧ್ಯಭಾಗ (ಕೇಂದ್ರಸ್ಥಾನ)ದಲ್ಲಿ ಹಂಪಿ ಇದೆ. ಹೀಗಾಗಿ ರಾಜ್ಯದ ಎಲ್ಲಾ ಮೂಲೆಗಳಿಂದ ಜನರು ಹೆಚ್ಚಿನ ಸಂಖ್ಯೆಯಲ್ಲಿ ಹಂಪಿಗೆ ಭೇಟಿ ನೀಡಲು ಅನುಕೂಲವಾಗಿದೆ. ಐತಿಹಾಸಿಕ ಸ್ಥಳವಾದ ಮೈಸೂರನ್ನು ಹೊರತುಪಡಿಸಿದರೆ ಹಂಪಿಗೆ ಹೆಚ್ಚಿನ ಸಂಖ್ಯೆಯಲ್ಲಿ ದೇಶಿಯ ಮತ್ತು ವಿದೇಶಿಯ ಪ್ರವಾಸಿಗರು ಬರುತ್ತಾರೆ. ವರ್ಷದ ಎಲ್ಲಾ ತಿಂಗಳುಗಳಲ್ಲಿ ಸಾಮಾನ್ಯವಾಗಿ ಪ್ರವಾಸಿಗರ ಭೇಟಿ ಇದ್ದೆ ಇರುತ್ತದೆ. ನವ್ಹಂಬರ್ ತಿಂಗಳಿನಿಂದ ಪ್ರಾರಂಭವಾಗಿ ಜನವರಿ ತಿಂಗಳ ಕೊನೆಯ ಕಾಲಾವಧಿಯವರೆಗೆ ಪ್ರವಾಸಿಗರ ದಟ್ಟಣೆ ಹೆಚ್ಚು. ಅಂದಾಜು ಪ್ರತಿ ವರ್ಷ ೫,೦೦,೦೦೦ ಪ್ರವಾಸಿಗರು ಹಂಪಿಗೆ ಬಂದು ಹೋಗುತ್ತಾರೆ. ೨೦೦೧ರಲ್ಲಿ ಸುಮಾರು ೩,೬೦,೦೦೦, ೨೦೦೨ರಲ್ಲಿ ೨,೯೯,೮೬೮ ಹಾಗೂ ೨೦೦೩ರಲ್ಲಿ ೩,೦೦,೦೦೦ ಸಂಖ್ಯೆಯಲ್ಲಿ ಜನ ಹಂಪಿಯ ಪ್ರವಾಸಕ್ಕೆ ಬಂದಿರುವ ದಾಖಲೆಗಳಿವೆ. ೧೯೮೦ ರಿಂದ ೨೦೦೪ರ ಸಾಲಿನಲ್ಲಿ ಬಂದಿರುವ ಪ್ರವಾಸಿಗರಲ್ಲಿ ೪,೭೦,೫೮೭ ದೇಶಿ ಪ್ರವಾಸಿಗರು ಹಾಗೂ ೧೦,೪೪೬ ವಿದೇಶಿ ಪ್ರವಾಸಿಗರು. ಈ ವರೆಗೆ ಹಂಪಿಗೆ ಭೆಟಿ ನೀಡಿರುವ ಪ್ರವಾಸಿಗರಲ್ಲಿ ಇದು ದಾಖಲೆ ಸಂಖ್ಯೆಯಾಗಿದೆ. ಅಧಿಕೃತ ದಾಖಲೆಗಳಿಗೆ ಒಳಪಡದೆ ಸಾವಿರಾರು ಸಂಖ್ಯೆಯ ಪ್ರವಾಸಿಗರು ವರ್ಷದ ಎಲ್ಲಾ ಕಾಲದಲ್ಲೂ ಹಂಪಿಗೆ ಭೇಟಿ ನೀಡುತ್ತಾರೆ.

ವಿದೇಶಿ ಪ್ರವಾಸಿಗರಲ್ಲಿ ಹೆಚ್ಚಾಗಿ ಇಸ್ರೇಲ್, ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳಿಗೆ ಸೇರಿದವರು ಬರುತ್ತಾರೆ. ಅಲ್ಲದೆ ಚೀನ, ಜಪಾನ್ ಹಾಗೂ ಕೋರಿಯಾ ದೇಶಗಳ ಪೂರ್ವ ಏಷ್ಯಾ ಸಂಸ್ಕೃತಿಯ ಜನರು ಹಂಪಿಗೆ ಬರುವ ಮಾಹಿತಿಗಳಿವೆ. ಆದರೆ ಅವರ ಸಂಖ್ಯೆ ವಿರಳ. ಎಲ್ಲಾ ತರಹದ ಪ್ರವಾಸಿಗರನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಬೇಕಾಗುವ ಭಕ್ಷ್ಯ-ಭೋಜನಗಳನ್ನು ಹಂಪಿ ಹೊಸಪೇಟೆ ತಂಗುದಾಣದಲ್ಲಿ ತಯಾರಿಸಲಾಗುತ್ತದೆ. ಈ ಪ್ರವಾಸಿಗರು ಸೈಕಲ್, ವಾಹನ ಹಾಗೂ ಕಾಲ್ನಡಿಗೆಯಲ್ಲಿ ಹಂಪಿ ಪರಿಸರವನ್ನು ವೀಕ್ಷಿಸಲು ಸುತ್ತಲೂ ಇಚ್ಛಿಸುತ್ತಾರೆ. ವಿದೇಶಿ ಪ್ರವಾಸಿಗರ ವಾಸ್ತವ್ಯಕ್ಕೆ ಹಲವಾರು ಅಡಚಣೆಗಳಿದ್ದರೂ ಪ್ರಸ್ತುತ ಲಭ್ಯವಾಗಿರುವ ಸೌಲಭ್ಯಗಳಿಂದ ತೃಪ್ತಿಪಟ್ಟುಕೊಳ್ಳುವ ಅನಿವಾರ್ಯತೆ ಉಂಟಾಗಿದೆ.

ವಿದೇಶಿ ಪ್ರವಾಸಿಗರಲ್ಲದೆ ದೇಶದ ನಾನಾ ಮೂಲೆಗಳಿಂದಲೂ ಜನರು ಹಂಪಿಯನ್ನು ಸಂದರ್ಶಿಸುತ್ತಾರೆ. ಪ್ರಮುಖವಾಗಿ ನಮ್ಮ ನೆರೆಯ ಆಂಧ್ರ, ತಮಿಳುನಾಡು ಹಾಗೂ ಮಹಾರಾಷ್ಟ್ರ ರಾಜ್ಯದ ಪ್ರವಾಸಿಗರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದೆ. ಅಲ್ಲದೆ ದೂರದ ರಾಜಸ್ತಾನ, ಗುಜರಾತ ಹಾಗೂ ದೆಹಲಿ ರಾಜ್ಯದ ಜನರು ಹಂಪಿಯ ಪ್ರವಾಸಕ್ಕೆ ಬರುತ್ತಾರೆ. ನಮ್ಮ ರಾಜ್ಯದ ಎಲ್ಲ

ಜಿಲ್ಲೆಗಳಿಂದ ಲಕ್ಷಾನುಗಟ್ಟಲೆ ಪ್ರವಾಸಿಗರ ಆಗಮನ ಹಂಪಿಗೆ ಇದ್ದೇ ಇದೆ. ಬಹುಪಾಲು ಜನರ ಪ್ರವಾಸದ ಮುಖ್ಯ ಉದ್ದೇಶ ಇಲ್ಲಿನ ಪ್ರಾಚೀನ ಸ್ಮಾರಕಗಳನ್ನು ನೀಡಿ ಆನಂದಿಸುವುದು ಹಾಗೂ ವಿರೂಪಾಕ್ಷನ ದರ್ಶನದಿಂದ ಪುಣ್ಯಪ್ರಾಪ್ತಿ ಪಡೆದುಕೊಳ್ಳುವುದಾಗಿದೆ.

ಜಗತ್ಪ್ರಸಿದ್ಧ ಹಾಗೂ ವಿಶ್ವಪರಂಪರೆಯ ಪಟ್ಟಿಯಲ್ಲಿ ಬರುವ ಹಂಪಿಯನ್ನು ಸಮಗ್ರವಾಗಿ ಅಭಿವೃದ್ಧಿಗೊಳಿಸಿ ರಕ್ಷಿಸುವುದು ಎಲ್ಲರ ಕರ್ತವ್ಯವಾಗಿದೆ. ಸ್ಥಳೀಯವಾಗಿ ಹೇರಳ ಪ್ರಮಾಣದಲ್ಲಿ ಉದ್ಯೋಗವನ್ನು ಕಲ್ಪಿಸುವ ಹಾಗೂ ರಾಜ್ಯಕ್ಕೆ ಹೆಚ್ಚಿನ ಆದಾಯ ತರುವ ಈ ಪ್ರವಾಸ ಕೇಂದ್ರವನ್ನು ಅಭಿವೃದ್ಧಿ ಪಡಿಸಿ ಉತ್ಕೃಷ್ಟಗೊಳಿಸಬೇಕಿದೆ. ಅಂತರಾಷ್ಟ್ರೀಯ ಮಟ್ಟದಲ್ಲಿ ಹಂಪಿಯ ಕ್ಷೇತ್ರವನ್ನು ಪರಿಚಯಿಸಿ ಹೆಚ್ಚಿನ ಲಾಭ ತಂದು ಕೊಡುವ ಉದ್ಯಮವನ್ನಾಗಿ ಮಾಡಬೇಕಾದರೆ ಕೆಲವು ಮೂಲಭೂತ ಸೌಕರ್ಯಗಳನ್ನು ಸುಧಾರಿಸಿ ಸುಸ್ಥಿತಿಯಲ್ಲಿ ಕಾಪಾಡಿಕೊಂಡು ಹೋಗುವುದು ಅನಿವಾರ್ಯವಾಗಿದೆ.

೧೯೮೦ರ ದಶಕದ ನಂತರ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ (ASI) ಹಾಗೂ ರಾಜ್ಯ ಪುರಾತತ್ವ ಇಲಾಖೆಯು ಹೆಚ್ಚಿನ ಮುತುವರ್ಜಿ ವಹಿಸಿ ಪ್ರಾಚೀನ ಪ್ರಸಿದ್ಧ ಹೀನಾಯ ಸ್ಥಿತಿ ತಲುಪಿದ್ದ ಹಂಪಿ ಪಟ್ಟಣವನ್ನು ಮತ್ತೆ ಜಾಗತಿಕ ಮಟ್ಟದಲ್ಲಿ ಎಲ್ಲರ ಗಮನ ಸೆಳೆಯುವಂತೆ ಮಾಡಿರುವುದು ಸ್ತುತ್ಯಾರ್ಹ. ಹಂಪಿಯನ್ನು ಒಳಗೊಂಡು ಪ್ರಾಚೀನ ಉಪ ಪಟ್ಟಣಗಳಲ್ಲಿನ ಅವಶೇಷಗಳನ್ನು ಸಂರಕ್ಷಿಸಿ ಅವುಗಳನ್ನು ಮುಂದಿನ ಪೀಳಿಗೆಯವರೆಗೆ ಉಳಿಸಿಕೊಂಡು ಹೋಗುವ ಕಾರ್ಯಗಳು ಸದ್ಯ ತುರ್ತಾಗಿ ಆಗಬೇಕಾಗಿರುವುದು ಅವಶ್ಯ. ಇಂಥ ಪರಿಣಾಮಕಾರಿ ಕ್ರಮಗಳಿಂದ ಹಂಪಿಯ ಪ್ರವಾಸೋದ್ಯಮ ಹೆಚ್ಚಿನ ವ್ಯಾಪಕತೆ ಪಡೆದು ಪ್ರಸಿದ್ಧಿ ಪಡೆಯುವುದರಲ್ಲಿ ಸಂಶಯವಿಲ್ಲ. ಆಧುನಿಕ ಕಾಲದ ಹಂಪಿಯ ಪ್ರವಾಸೋಧ್ಯಮ ಕುರಿತು ಅನೇಕ ಕಾರ್ಯಗಳು ಕಾರ್ಯ ಪ್ರವೃತ್ತಿಯಾಗಬೇಕಾಗಿದೆ.

ಪ್ರವಾಸೋಧ್ಯಮದ ಬೆಳವಣಿಗೆಯ ದೃಷ್ಟಿಯಿಂದ ಕೇವಲ ಸರಕಾರವೇ ಎಲ್ಲಾ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವುದು ಕಷ್ಟಸಾಧ್ಯ. ಇದರಿಂದಾಗಿ ಸರಕಾರವು ಸ್ಥಳೀಯ ಸಹಕಾರಿ ಸಂಸ್ಥೆಗಳು ಸಹಭಾಗಿಯಾಗಿ ಸರಕಾರವು ಹಂಪಿಯ ಪ್ರವಾಸೋಧ್ಯಮದ ಅಭಿವೃದ್ಧಿಗೆ ಕ್ರಮಕೈಗೊಳ್ಳುವುದು ಅವಶ್ಯಕ.

* **ಜನಪದ**

ಹಂಪಿಯ ಮೌಖಿಕ ಚರಿತ್ರೆಯನ್ನು ಬಿಂಬಿಸುವಲ್ಲಿ ಈ ಪ್ರದೇಶದ ಜನಪದರಲ್ಲಿ ಹೆಚ್ಚಾಗಿ ಜನಜನಿತವಿರುವ ಜನಪದ ಮುರಾಣಗಳು, ಜನಪದ ಕಾವ್ಯಗಳು, ರಾಮಾಯಣ, ಮಹಾಭಾರತ, ಜನಪದ ಶಿವಪುರಾಣ, ವಿಷ್ಣು ಪುರಾಣ, ಚಾರಿತ್ರಿಕ ಕಾವ್ಯಗಳಾಗಿ ಬಿಂಬಿತವಾಗಿರುವ ಕುಮಾರರಾಮನ ಜನಪದ ಕಾವ್ಯ ಇತ್ಯಾದಿ ಜನಪದ ಕಾವ್ಯ ಪ್ರಕಾರಗಳು ದೊರಕುತ್ತವೆ.

ಜನಪದ ಬಿಡಿ ಗೀತೆಗಳಲ್ಲ. ಹಂಪಿಯ ದೈವ, ನದಿ, ನಿಸರ್ಗಕ್ಕೆ ಸಂಬಂಧಿಸಿದಂತೆ ಹಲವಾರು ಜನಪದ ಬಿಡಿ ಹಾಡುಗಳು ಕಂಡುಬರುತ್ತವೆ. ಆದರೆ ಇಲ್ಲಿನ ಪ್ರಾದೇಶಿಕ ವೈಶಿಷ್ಟತೆಯನ್ನು ಕುರಿತು ಇವು ಹೆಚ್ಚಾಗಿ ಕಂಡುಬರುತ್ತವೆ. ಕೋಲಾಟ, ಭಜನೆ, ಪದ, ಡೊಳ್ಳಿನ ಪದ, ತತ್ವಪದ, ಹಂಪಿ ಪದ ಇತ್ಯಾದಿ.

ಜನಪದ ಗೀತೆ ಪ್ರಕಾರಗಳಲ್ಲಿ ಹಂಪಿಯ ಸಂಸ್ಕೃತಿ ಹಾಗೂ ಇತಿಹಾಸಕ್ಕೆ ಸಂಬಂಧಿಸಿದದ ಅಂಶಗಳು ಕಂಡುಬುರುತ್ತವೆ. ಉದಾಹರಣೆಗೆ ಹೆಳವರು ಸಮುದಾಯಗಳ ಕುಟುಂಬದ ವೃಕ್ಷವನ್ನು ಕಟ್ಟಿಕೊಡುವವರು. ಅಲ್ಲದೆ ಆ ಸಮುದಾಯ ಹಾಗೂ ಕುಟುಂಬಗಳ ನಿರಂತರ ಸಂಪರ್ಕವನ್ನು ಹೊಂದುವ ಮೂಲಕ ತಮ್ಮ ಕಂಠಸ್ಥ ಪರಂಪರೆಯಲ್ಲಿ ಅವುಗಳನ್ನು ಉಳಿಸಿಕೊಂಡು ತಲೆಮಾರಿನಿಂದ ತಲೆಮಾರಿಗೆ ಸಾಗಿಸಿಕೊಂಡು ಬಂದಿರುತ್ತಾರೆ. ಆಯಾ ಸಮುದಾಯ ಹಾಗೂ ಕುಟುಂಬಗಳಿಗೆ ಗೊತ್ತಿರದ ವಿಚಾರಗಳು, ವಾಸ್ತವ ಸತ್ಯಗಳು ಹೆಳವರಲ್ಲಿ ದೊರಕುತ್ತವೆ.[೬]

*** ಐತಿಹ್ಯಗಳು**

ಮಾನವನ ಸಾಮಾಜಿಕ ಜೀವನಕ್ಕೆ ಹತ್ತಿರವಾದ ಹಗೂ ನಡೆಯಬಹುದಾದ ಘಟನೆಗಳನ್ನು ಆಧಾರ ಸಹಿತವಾಗಿ ವಾಸ್ತವ್ಯಕ್ಕೆ ಹತ್ತಿರದಲ್ಲಿ ವಿಚಾರಗಳನ್ನು ಬಿಂಬಿಸುವ ಮೌಖಿಕ ಸಾಹಿತ್ಯದ ಘಟನೆಯ ತುಣುಕುಗಳು ಹಂಪಿಯ ಐತಿಹ್ಯಗಳು ಹೆಚ್ಚಾಗಿ ಜನಸಾಮಾನ್ಯರಿಗೆ ಸಂಬಂಧಪಟ್ಟವು ಗಳಾಗಿದ್ದು, ವಿರೂಪಾಕ್ಷ ದೇವಾಲಯದ ತಳವಾರಪ್ಪನ ಕುಲ್ಲು, ಗಾಗ್ರಿ ಗುಂಡಯ್ಯನ ಗುಡಿ, ಅಕ್ಕತಂಗಿಯರ ಕಲ್ಲು, ಆನೆಗುಂದಿಯ ಕನ್ನೆರಮ್ಮ ಬಾವಿ, ವಾಲಿಗವಿ, ಸೀತೆ ಸೆರಗು, ಕಂಬದ ಮಾಸ್ತಿಕಲ್ಲು, ಏಡಿಗುಡ್ಡ ಕಮಲಾಪುರದ ಬೇಡರಕೇರಿಯ ತಳವಾಪ್ಪನ ಕಲ್ಲು, ನಂದಿಬಂಡೆ, ಧರ್ಮರ ಗುಡ್ಡ, ನಾಗೇನಹಳ್ಳಿ, ಮಾತಂಗ ಬೆಟ್ಟ, ಅಂಜನಾದ್ರಿ ಬೆಟ್ಟ, ಪಂಪ ಸರೋವರ, ಲಂಬಾಣಿ ಇನಾಮ್, ಕೋತಿ ಇನಾಮ್, ಕೋತಿ ಕಲ್ಲು ಇತ್ಯಾದಿ ಈ ಪ್ರದೇಶಗಳಲ್ಲಿ ಜನಸಾಮಾನ್ಯರಿಗೆ ಸಂಬಂಧಿಸಿದ ಐತಿಹ್ಯಗಳು ಕಂಡುಬರುತ್ತವೆ. ಅಲ್ಲದೆ ಕೆರೆ, ಬಾವಿ, ಕೊಳ ಹಾಗೂ ಜನವಸತಿ ನೆಲೆಗಳಿಗೆ ಸಂಬಂಧಿಸಿದಂತೆ ಪುರಾಣ ಐತಿಹ್ಯಗಳು ಹಾಗೂ ಸಾಮಾಜಿಕ ಐತಿಹ್ಯಗಳು ಕಂಡುಬರುತ್ತವೆ.

*** ಹಂಪಿಯ ಪ್ರವಾಸಿ ತಾಣದ ಬಗೆಗೆ ಪ್ರಚಾರ**

ಮಾಹಿತಿ ಪ್ರಧಾನವಾದ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಜಾಹಿರಾತು ಹಾಗೂ ಪ್ರಚಾರಗಳು ಅತಿ ಪ್ರಮುಖವಾದ ಪಾತ್ರ ವಹಿಸುತ್ತಿವೆ. ಆದ್ದರಿಂದ ಈ ಉದ್ಯಮವನ್ನು ಉತ್ತೇಜಿಸುತ್ತಿರುವ ಸಂಬಂಧಪಟ್ಟ ಇಲಾಖೆಗಳು ಹೊರ ದೇಶದ ಜನರಿಗೆ ಪ್ರವಾಸಿ ತಾಣಗಳ ಬಗೆಗೆ ಸುಲಭವಾಗಿ ಮಾಹಿತಿ ಸಿಗುವಂತೆ ಕ್ರಮವಹಿಸಿಬೇಕು. ಹಂಪಿ ಹಾಗೂ ಸುತ್ತಲಿನ ಪ್ರವಾಸಿ ತಾಣಗಳ ವಿವರವನ್ನು ಸಚಿತ್ರ ಮಾಹಿತಿಗಳೊಂದಿಗೆ ಕೈಪಿಡಿ ಸಿದ್ಧಪಡಿಸಿ ಉಚಿತವಾಗಿ ಎಲ್ಲರಿಗೂ

ತಲುಪಿಸಬೇಕು. ಇದರ ಬಗ್ಗೆ ಮಾಹಿತಿಗಳು ವಿವರವಾಗಿ ಮತ್ತು ಸುಲಭವಾಗಿ ಸಿಗುವಂತಿರಬೇಕು. ಸ್ಥಳೀಯ ಪತ್ರಿಕೆ ಹಾಗೂ ಮಾಧ್ಯಮಗಳಿಗೆ ಹಂಪಿಯ ಪ್ರವಾಸದ ಪ್ರಾಮುಖ್ಯತೆಯತನ್ನು ಜಾಹೀರಾತುಗಳ ಮೂಲಕ ಪ್ರಚಾರ ಪಡಿಸುವುದು ಅವಶ್ಯಕ ಮಾಹಿತಿ ಯುಗದಲ್ಲಿ ಹಂಪಿಯ ಪ್ರವಾಸೋದ್ಯಮಕ್ಕೆ ಸಂಬಂಧಪಟ್ಟಂತೆ ಪ್ರವಾಸಿ ಅಂತರ್ಜ್ಯಾಲವನ್ನು ವಿಶೇಷವಾಗಿ ರೂಪಿಸುವುದು ಮುಖ್ಯವಾಗಿದೆ.

ಹಂಪಿಯು ಪ್ರಸ್ತುತ ಸಂದರ್ಭದಲ್ಲಿ ನೂರಾರು ವರ್ಷ ಹಳೆಯ ಸ್ಮಾರಕಗಳಿಗೆ ಹೊಸ ಮೆರುಗು ಮತ್ತು ಮೂಲಸೌಕರ್ಯಕ್ಕೂ ಒತ್ತನ್ನು ಕೊಡುತ್ತಿದ್ದರೆ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯಿಂದ (ಎ.ಎಸ್.ಐ) ಹಂಪಿಯಲ್ಲಿ ಸ್ಮಾರಕಗಳ ಜೀರ್ಣೋದ್ಧಾರ ಇತ್ತೀಚಿಗೆ ಮಾಡಲಾಗುತ್ತಿದೆ. ಇನ್ನೂ ಹಂಪಿಯ ಪರಿಸರದಲ್ಲಿಯೂ ಸಾಕಷ್ಟು ಅಭಿವೃದ್ಧಿಯನ್ನು ಮಾಡುವ ಕೆಲಸ ಪ್ರಾರಂಭವಾಗಬೇಕು.

ಕ್ರಿ.ಶ. ೧೫೬೫ ಕದನದ ನಂತರ ಹಂಪಿಯ ಬಹುತೇಕ ಸ್ಮಾರಕಗಳು ಅನಾಥಗೊಂಡು ಅವನತಿಯತ್ತ ಸಾಗಿದವು. ಈ ರೀತಿಯ ಅವನತಿಗೆ ನಮ್ಮ ಸಾಂಪ್ರದಾಯಿಕ ಮೂಢನಂಬಿಕೆಗಳು ಸಹ ಮುಖ್ಯ ಕಾರಣ. ಈಗಲೂ ವಾಸದ ಮನೆಗಳಿಗೆ ಕೆಲವು ಪ್ರಾಣಿಪಕ್ಷಿಗಳು ಪ್ರವೇಶ ಮಾಡಿದರೆ ಮನೆಯನ್ನು ಧಾರ್ಮಿಕ ಕ್ರಿಯೆಗಳನ್ನು ಆಚರಿಸುವ ಮೂಲಕ ಸ್ವಚ್ಛಗೊಳಿಸುವುದು ಸಾಮಾನ್ಯ ಸಂಗತಿ ಇಂತಹ ಮನಃಸ್ಥಿತಿಯಲ್ಲಿ ದೇವಾಲಯಗಳಿಗೆ ಪರಧರ್ಮಿಯರು ಪ್ರವೇಶಿಸುವುದು, ವಿಗ್ರಹಗಳನ್ನು ಭಗ್ನಗೊಳಿಸುವುದು ಇನ್ನಿತರ ಘಟನೆಗಳಿಂದಾಗಿ ಅಂದಿನ ಸಮಾಜ ಹಾಳುಬಿದ್ದ ದೇವಾಲಯಗಳನ್ನು ಪುನರುಜ್ಜೀವನಗೊಳಿಸುವಲ್ಲಿ ನಿರಾಸಕ್ತಿಯನ್ನು ತೋರಿದೆ.

ಪ್ರಸ್ತುತ ಸಂದರ್ಭದಲ್ಲಿ ಹಂಪಿಯ ಸ್ಮಾರಕಗಳು ಸಂರಕ್ಷಣೆ ಮತ್ತು ನಿರ್ವಹಣೆ ಸಂಬಂಧಪಟ್ಟ ಇಲಾಖೆ ಮತ್ತು ಸರಕಾರಗಳಿಗೆ ಒಂದು ಸವಾಲಾಗಿ ಪರಿಣಮಿಸಿದೆ. ಒಂದೆಡೆ ಅದರ ಐತಿಹಾಸಿಕ ಮಹತ್ವವನ್ನು ಉಳಿಸಿಕೊಳ್ಳಲು ಯುನೆಸ್ಕೊ ಸಂಸ್ಥೆಯ ಮನ್ನಣೆಗಳಿಸಲು ಪ್ರಯತ್ನಿಸುವೆ. ಯುನೆಸ್ಕೊವಿನ ವಿಶ್ವಪರಂಪರೆ ಸ್ಮಾರಕಗಳ ಸಂರಕ್ಷಣೆಗೆ ಸಂಬಂಧಿಸಿದಂತೆ ನೀತಿ ನಿಯಮಗಳಿದ್ದು, ಅವುಗಳನ್ನು ಪಾಲಿಸುವ ಜವಾಬ್ದಾರಿ ರಾಜ್ಯ ಮತ್ತು ಕೇಂದ್ರ ಸರಕಾರಗಳ ಮೇಲಿದೆ ಅದೇ ರೀತಿ ಹಂಪಿ ಮತ್ತು ಅದರ ಸ್ಮಾರಕಗಳ ಪರಿಸರದಲ್ಲಿ ವಾಸಿಸುತ್ತಿರುವ ಜನರ ಹಿತವನ್ನು ಕಾಪಾಡುವ ಜವಬ್ದಾರಿ ಮತ್ತೊಂದೆಡೆ.[೨]

ಹಂಪಿ ವೀಕ್ಷಣೆಗೆ ನಾನಾ ದೇಶಗಳಿಂದ ಪ್ರವಾಸಿಗರು ಆಗಮಿಸುತ್ತಾರೆ. ಅವರಲ್ಲಿ ಇಸ್ರೇಲ್, ಹಾಲೆಂಡ್, ಇಟಲಿ, ಸ್ವೀಡನ್, ಬೆಲ್ಜಿಯಂ, ಡೆನ್ಮಾರ್ಕ್, ಆಸ್ಟ್ರೇಲಿಯಾ, ಕೆನಾಡಾ, ಅಮೆರಿಕಾ, ಜಪಾನ್, ಬೆಲ್ಜಿಯಂ, ಸ್ವಿಡ್ಜರ್‌ಲ್ಯಾಂಡ್, ಪೋಲೆಂಡ್, ಪೋರ್ಚುಗಲ್ ಸೇರಿದಂತೆ ನೂರಾರು ದೇಶಗಳ ಪ್ರವಾಸಿಗರ ಸಂಖ್ಯೆ ಬೆಳೆಯುತ್ತಾ ಸಾಗಿದೆ. ಹೀಗೆ ವಿಶ್ವ ಪರ್ಯಟನಾ ಅಂಗವಾಗಿ

ಹಂಪಿಗೆ ಆಗಮಿಸುವ ಅನೇಕ ದೇಶಗಳ ಪ್ರವಾಸಿಗರಲ್ಲದ ಈ ಭಾಗದಲ್ಲಿ ವ್ಯಾಪಾರ-ವ್ಯವಾರಗಳಲ್ಲಿ ಚೇತರಿಕೆ ಕಂಡುಬರುತ್ತದೆ.

ವಿವಿಧ ಕಡೆ ಸಂಗ್ರಹಿಸುತ್ತಿರುವ ಪ್ರವೇಶ ಶುಲ್ಕ ಮತ್ತು ಟೇಲ್ ಫೀಗಳನ್ನು ರದ್ದುಪಡಿಸಿ ಒಂದು ಕಡೆ ಮಾತ್ರ ಇವುಗಳನ್ನು ಸಂಗ್ರಹಿಸಲು ಕ್ರಮ ಕೈಗೊಳ್ಳುವುದು.

| ಕ್ರ.ಸ. | ವರ್ಷ | ಪ್ರವಾಸಿಗರ ಸಂಖ್ಯೆ |
|---|---|---|
| ೧. | ೧೯೯೬-೯೭ | ೧,೭೨,೫೦೩ |
| ೨. | ೧೯೯೭-೯೮ | ೧,೮೨,೦೪೮ |
| ೩. | ೧೯೯೮-೯೯ | ೩,೨೦,೫೪೦ |
| ೪. | ೧೯೯೯-೨೦೦೦ | ೨,೧೨,೬೧೦ |
| ೫. | ೨೦೦೦-೨೦೦೧ | ೨,೯೭,೯೭೬ |
| ೬. | ೨೦೦೧-೨೦೦೨ | ೩,೧೫,೭೯೧ |
| ೭. | ೨೦೦೨-೨೦೦೩ | ೨,೯೬,೨೩೨ |
| ೮. | ೨೦೦೪-೨೦೦೫ | ೩,೧೮,೦೨೭ |
| ೯. | ೨೦೦೫-೨೦೦೬ | ೩,೯೯,೦೬೪ |
| ೧೦. | ೨೦೦೬-೨೦೦೭ | ೨,೮೦,೦೬೦ |
| ೧೧. | ೨೦೧೪-೧೫ | ೨,೦೦,೩೪೬ |
| ೧೨. | ೨೦೧೫-೧೬ | ೨,೫೨,೬೩೦ |
| ೧೩. | ೨೦೧೬-೧೭ | ೨,೫೮,೦೦೦ |
| ೧೪. | ೨೦೧೭-ಜೂನ್ | ೧,೦೦,೦೦೦ [೮] |

*** ಶ್ರೀ ವಿರೂಪಾಕ್ಷ ದೇವಾಲಯ**

ವಿರೂಪಾಕ್ಷ ದೇವಾಲಯಕ್ಕೆ ಮೂರು ಗೋಪುರಗಳುಂಟು ಮೊದಲನೆಯ ಪ್ರಕಾರದಿಂದ ಪಶ್ಚಿಮ ದಿಕ್ಕಿಗೆ ಹೊರಟರೆ ಮತ್ತೊಂದು ಗೋಪುರ ಕಾಣಬರುತ್ತದೆ. ಈ ಗೋಪುರಕ್ಕೆ ರಾಯಗೋಪುರ ಎಂದಿದೆ. ಪೂರ್ವ ದಿಕ್ಕಿಗಿರುವ ಗೋಪುರವು ಪ್ರಸ್ತುತ ಸಂದರ್ಭದಲ್ಲಿ ಇದು ಜೀರ್ಣದ್ದಾರಗೊಳ್ಳುತ್ತಿದೆ. ಎದುಗಿರುವುದು ಶ್ರೀ ವಿರೂಪಾಕರ್ಶೇಶ್ವರ ದೇವಾಲಯ ಶ್ರೀ ವಿರೂಪಾಕ್ಷನನ್ನು ಪಂಪಾಪತಿ ಎಂದು ಕರೆಯುವುದು ವಾಡಿಕೆಗಿದೆ. ಇದು ಅತ್ಯಂತ ಪ್ರಾಚೀನ ದೇವಾಲಯ. ಇದರ ಬಾಗಿಲು

ಸೊಗಸಾದ ಕೆತ್ತನೆಯಿಂದ ಕೂಡಿದ್ದು, ಕಂಬಗಳ ಚರಕಿ ಯಂತ್ರದಿಂದ ಕೂಡಿದೆ ಮತ್ತು ಅಂಲಕೃತಗೊಳ್ಳುತ್ತಿರುವ ವಿಸ್ತಾರವಾದ ಛಾವಣಿಯಿಂದ ಇದೆ.

*** ವಿಜಯ ವಿಠ್ಠಲ ದೇವಾಲಯ**

ವಿಠ್ಠಲ ದೇವಾಲಯದ ಎದುರಿಗೆ ಜಗದ್ವಿಖ್ಯಾತ ಶಿಲಾರಾಥವಿದೆ. ಒರಟು ಬೆಣಚು ಕಲ್ಲಿನಿಂದ ನಿರ್ಮಿಸಲಾದ ರಥವಾಗಿದೆ. ಈಗಲೂ ಅದನ್ನು ಕಾಣಬಹುದು. ಪ್ರಾಚೀನ ಕಾಲದ ರಥವಾದ್ದರಿಂದ ಪ್ರಸ್ತುತ ಇದು ಆಗಿನ ಸ್ಥಿತಿ ಕಳೆದುಕೊಂಡಿದೆ ಎಂದು ಹೇಳಬಹುದು.

*** ಕೃಷ್ಣದೇವಾಲಯ**

ಹೇಮಕೂಟದಿಂದ ಕಮಾಲಾಪುರಕ್ಕೆ ರಸ್ತೆಯ ಮೂಲಕ ಹೊರಟರೆ ಹಂಪಿಯ ಪ್ರವೇಶ ದ್ವಾರ ಸಿಗುವುದು. ಈಗ ಈ ದ್ವಾರವು ಶಿಥಿಲಗೊಂಡಿದೆ. ಈ ಪ್ರವೇಶದ್ವಾರದ ಮೂಲಕ ಮುಂದೆ ಸಾಗಿದರೆ ಬಲಬದಿಗೆ ಒಂದು ವಿಶಾಲವಾದ ದೇವಾಲಯ ಸಿಗುವುದು ಇದೇ ಕೃಷ್ಣದೇವಾಲಯ. ಈ ದೇವಾಲಯವು ೩೨೦ ಅಡಿ ಉದ್ದ, ೨೦೦ ಅಡಿ ಅಗಲವಾಗಿಯೂ ಇದೆ. ಈ ದೇವಾಲಯವು ಸುಭದ್ರವಾಗಿದೆ. ದೇವಾಲಯಕ್ಕೆ ಕೋಟೆ ರಕ್ಷಣೆಯೂ ಇದೆ. ದೇವಾಲಯವು ಪೂರ್ವಕ್ಕೆ ಅಭಿಮುಖವಾಗಿದೆ.

*** ಉಗ್ರ ನರಸಿಂಹ**

ಈಗ ಪ್ರಸ್ತುತ ಸಂದರ್ಭದಲ್ಲಿ ಇದರ ಮುಂದೆ ಹಾಸುಗಲ್ಲು ಹಾಕಲಾಗುತ್ತಿದೆ ಮತ್ತು ಇದು ಭಿನ್ನವಾಗಿದೆ.

*** ಬಡವಿಲಿಂಗ**

ಇದು ಕರಿಯ ಕಲ್ಲಿನಿಂದ ಕೂಡಿದ್ದು ಇದರ ಗರ್ಭಗುಡಿಯುಂಟು, ಇದರ ಪಕ್ಕದಲ್ಲಿ ಕೆಲವಾರು ಗಜದೂರದಲ್ಲಿ ನರಸಿಂಹನ ವಿಗ್ರಹವಿದೆ.

*** ಹಜಾರ ರಾಮನ ದೇವಾಲಯ**

ಈ ದೇವಾಲಯ ಅರಮನೆಗೆ ಹೊಂದಿಕೊಂಡಂತೆಯೇ ಇದೆ. ಈ ದೇವಾಲಯದಲ್ಲಿ ಗೋಡೆಗಳ ಮೇಲೆ ಚಿತ್ರಪಟಗಳ ಸಾಲು ಹೇರಳವಾಗಿದೆ. ಈ ದೇವಾಲಯದಲ್ಲಿ ಮೊದಲಿನ ಪಟ್ಟಿಕೆಯ ಚಿತ್ರಗಳು ಬೇಲೂರು, ಹಳೆಬೀಡು ದೇವಾಲಯಗಳಲ್ಲಿ ಉಪಯೋಗಿಸಿರುವಂತೆ ಬಳಪದ ಕಲ್ಲನ್ನು ಉಪಯೋಗಿಸಲಾಗಿದೆ. ಗೋಡೆಗಳಲ್ಲಿ ಚಿತ್ರಗಳ ಪಟ್ಟಿಗಳ ಹಂತ ಹಂತವಾಗಿದ್ದು, ಒಂದು ಹಂತದಲ್ಲಿ ಅನೇಕ ಭಂಗಿಗಳು, ಅನೇಕ ಹಿಂದೂ ದೇವತೆಗಳ ವಿಗ್ರಹಗಳೂ ಕಂಡುಬರುತ್ತವೆ. ಪ್ರಧಾನ ಹಂತದ ಕೆಳಭಾಗದ ಗೋಡೆಗಳಲ್ಲಿ ದಶಾವತಾರದ ವಿಗ್ರಹಗಳ ವೈಷ್ಣವರ ದೇವಾನುದೇವತೆಗಳ ವಿಗ್ರಹಗಳನ್ನು ಬಿಡಿಸಿದ್ದಾರೆ.[೯]

## ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಕಾರ್ಯಕ್ಷೇತ್ರ

೧. ಈ ಪ್ರದೇಶಗಳಲ್ಲಿ ಪಾರಂಪರಿಕ ಕಟ್ಟಡಗಳು ಮತ್ತು ಸ್ಮಾರಕಗಳನ್ನು ವ್ಯವಸ್ಥಿತವಾಗಿ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಗುರುತಿಸುವುದು.

೨. ಗುರುತಿಸಲಾದ ಪಾರಂಪರಿಕ ಕಟ್ಟಡಗಳ ಸಂರಕ್ಷಣಾ ಕಾರ್ಯಗಳನ್ನು ಆದ್ಯತಾನುಸಾರವಾಗಿ ಸಾರ್ವಜನಿಕ ಸಹಭಾಗಿತ್ವದೊಂದಿಗೆ ಕೈಗೊಳ್ಳುವುದು.

೩. ಪಾರಂಪರಿಕ ಕಟ್ಟಡ ಮತ್ತು ಪ್ರದೇಶಗಳನ್ನು ಸಂರಕ್ಷಿಸಲು ಮತ್ತು ಸುತ್ತಮುತ್ತಲು ನೈರ್ಮಲ್ಯವನ್ನ ಉಕಾಪಾಡಲು ಸಾರ್ವಜನಿಕರಲ್ಲಿ ತಿಳುವಳಿಕೆ ಮೂಡಿಸಲು ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಪರಂಪರೆ ಕುರಿತಂತೆ ಪ್ರದರ್ಶನ/ ಕಮ್ಮಟ/ ವಿಚಾರ ಸಂಕಿರಣ/ ಕಾರ್ಯಗಾರಗಳನ್ನು ಏರ್ಪಡಿಸುವುದು ಹಾಗೂ ಪರಂಪರೆಯ ಸಂರಕ್ಷಣೆ ಕುರಿತು ಲಘು ಪುಸ್ತಕ/ ಮಾಹಿತಿ ಪುಸ್ತಕಗಳ ಪ್ರಕಟಣೆ ಮಾಡುವುದು.

೪. ಯುನೆಸ್ಕೋ, ಭಾರತ ಸರ್ಕಾರ, ರಾಜ್ಯ ಸರ್ಕಾರ ಹಾಗೂ ಸ್ವಾಯುತ್ತ ಸಂಸ್ಥೆಗಳಿಂದ ಮತ್ತು ಖಾಸಗಿ ಉದ್ಯಮಿಗಳ ನೆರವಿನೊಂದಿಗೆ ಹಣಕಾಸಿನ ಸಹಾಯ ಪಡೆದು ವಿನೂತನ ಯೋಜನೆಗಳನ್ನು ತನ್ನ ಕಾರ್ಯವ್ಯಾಪ್ತಿಯಲ್ಲಿ ಗುರುತಿಸುವುದು.

೫. ಸ್ಮಾರಕಗಳ ಬಳಿ ನಿರ್ಮಾಣವಾಗಿರುವ ಅನಧೀಕೃತ ಕಟ್ಟಡಗಳನ್ನು ತೆರವುಗೊಳಿಸುವುದು ಮತ್ತು ಎಲ್ಲಾ ಎನ್ಕ್ರೋಚ್‌ಮೆಂಟ್‌ಗಳನ್ನು ತಡೆಯುವುದು.

೬. ಕಲ್ಲು, ಗಣಿಗಾರಿಕೆಗಳು ನಡೆಯದಂತೆ ಕ್ರಮಕೈಗೊಳ್ಳುವುದು ಇದಕ್ಕಾಗಿ ಒಂದು ಟಾಸ್ಕ್ ಪೋರ್ಸ್ ಕಮಿಟಿಯನ್ನು ನೇಮಿಸುವುದು.

೭. ಅವಸಾನಂದ ಅಂಚಿನಲ್ಲಿರುವ ಎಲ್ಲಾ ಕಲಾಪ್ರಕಾರಗಳನ್ನು ಗುರುತಿಸಿ ದಾಖಲಿಸುವುದು, ಹಾಗೆಯೇ ಸ್ಥಳೀಯ ಕಲಾವಿದರನ್ನು ಗುರುತಿಸುವುದು ಮತ್ತು ಅವರು ಭಾಗವಹಿಸಲು ಅನುಕೂಲವಾಗುವಂತೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಅಯೋಜಿಸುವುದು.

೮. ಈ ಪ್ರದೇಶದಲ್ಲಿ ನಡೆಯುವ ಹಬ್ಬ, ಜಾತ್ರೆ, ಸಂಪ್ರದಾಯ, ನಂಬಿಕೆ, ಕಲಾಪರಂಪರೆ, ವೈದ್ಯಪದ್ಧತಿ, ಉಡುಗೆ-ತೊಡುಗೆ ಮೊದಲಾದ ಅಪೂರ್ವ ಪರಂಪರೆಯನ್ನು ಸರಿಯಾಗಿ ಗುರುತಿಸಿ ದಾಖಲಿಸುವುದು.

೯. ಅನಧೀಕೃತವಾಗಿ ನಡೆಯುತ್ತಿರುವ ಉದ್ಯಮ ಮತ್ತು ವ್ಯಾಪಾರ, ವಾಣಿಜ್ಯ ಚಟುವಟಿಕೆಗಳನ್ನು ನಿಯಂತ್ರಿಸುವುದು.

೧೦. ಅನಧೀಕೃತ ಚಟುವಟಿಕೆಗಳನ್ನು ತಡೆದು ಜನರಿಗೆ ಅನುಕೂಲವಾಗುವಂತೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು.

೧೧. ಪ್ರಸಕ್ತ ನಡೆಸುತ್ತಿರುವ ಬ್ಯಾಟರಿಚಾಲಿತ ವಾಹನಗಳನ್ನು ರದ್ದುಪಡಿಸಿ ಅವುಗಳ ಜಾಗದಲ್ಲಿ ನಮ್ಮ ಪರಂಪರೆಯ ಒಂದು ಭಾಗವಾದ ಕುದುರೆಗಾಡಿ (ಜಟಕಾಬಂಡಿ) ಇಲ್ಲವೇ ಎತ್ತಿನ ಬಂಡಿಗಳನ್ನು ಪ್ರವಾಸಿಗರ ಓಡಾಟಕ್ಕೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡುವುದು.

**ಅಡಿ ಟಿಪ್ಪಣಿಗಳು**

೧. ಸೂರ್ಯನಾಥ ಸಂಕ್ಷಿಪ್ತ ಇತಿಹಾಸ ೧೯೭೩. ಪು.ಸಂ. ೧೬೧, ೧೬೨

೨. ಟಿ.ಎಸ್. ಸತ್ಯನ್, ಎಸ್. ಶ್ರೀನಿವಾಸಾಚಾರ್, ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ. ಪು.ಸಂ. ೧೬

೩. ಅದೇ ಪು.ಸಂ. ೧೭

೪. ಅದೇ ಪು.ಸಂ. ೨೯

೫. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ ೨೦೦೬, ಹಂಪಿ ಅಂದು ಇಂದ. ಪು.ಸಂ. ೯೩

೬. ಅದೇ ಪು.ಸಂ. ೯೪

೭. ಅದೇ ಪು.ಸಂ. ೨೭

೮. ಅದೇ ಪು.ಸಂ. ೨೯

೯. ಶ್ರೀ ಬೇಲೂರು ಕೃಷ್ಣಮೂರ್ತಿ, ವಿಜಯನಗರ ಸಾಮ್ರಾಜ್ಯ ಚರಿತ್ರೆ ಪು.ಸಂ. ೨೦

# ಅಧ್ಯಾಯ: ಐದು

## ಸಮಾರೋಪ

ಹಂಪಿಯ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದು, ದೇಶೀಯ ಹಾಗೂ ವಿದೇಶಿಯ ಸಾಹಿತ್ಯಗಳಲ್ಲಿ ನಾನಾ ಬಗೆಯಲ್ಲಿ ವರ್ಣಿಸಲ್ಪಟ್ಟು ಸಾಮ್ರಾಜ್ಯದ ಅವನತಿಯನ್ನು ಕಂಡು 'ಹಾಳು ಹಂಪಿ' ಎಂದು ಆಧುನಿಕ ಇತಿಹಾಸಕಾರರಿಂದ ಸಂಭೋಧಿಸಲ್ಪಟ್ಟು ಇಂದು ವಿಶ್ವಪರಂಪರೆಯ ತಾಣಗಳಲ್ಲೊಂದಾಗಿ ಮೆರೆಯುತ್ತಿದೆ. ಒಂದು ಸಾಮ್ರಾಜ್ಯದ ಉದಯ, ಉತ್ಕರ್ಷ ಹಾಗೂ ಅವನತಿಗೆ ಸಾಕ್ಷಿಯಾದ ಈ ಪ್ರದೇಶವು ಇತಿಹಾಸದ ಪುಟಗಳಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ವಿಜಯನಗರದಂಥ ನಗರವನ್ನು "ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ" ಎಂಬ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕನ ವರ್ಣನೆ ಇಂದಿಗೂ ಹಂಪಿಯ ಅಳಿದುಳಿದ ಅವಶೇಷಗಳಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಇದು ವಿಜಯನಗರ ಸಾಮ್ರಾಜ್ಯದ ಉದಯಕ್ಕೂ ಮೊದಲೇ ಪೌರಾಣಿಕ ನೆಲೆಯಾಗಿ ಪವಿತ್ರ ಕ್ಷೇತ್ರವೆನಿಸಿತ್ತು. ಪಂಪಾತೀರ್ಥ, ಪಂಪಾವರಕ್ಷೇತ್ರ, ವಿರೂಪಾಕ್ಷತೀರ್ಥ, ಹಂಪಾತೀರ್ಥ, ಭಾಸ್ಕರ ಕ್ಷೇತ್ರ ಎಂದು ಮುಂತಾಗಿ ಶಾಸನಗಳಲ್ಲಿ ಉಲ್ಲೇಖಿತಗೊಂಡ ಹಂಪಿಯ ಇತಿಹಾಸವು ಪೌರಾಣಿಕ ಮತ್ತು ಭೌಗೋಳಿಕವಾಗಿ ಹಲವು ಬೆಟ್ಟಗಳಿಂದ ಆವೃತ್ತವಾದ ಹಂಪಿಯ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ವಿಜಯನಗರ ಅರಸರು ಹಲವು ಯುದ್ಧಗಳನ್ನು ಕೈಗೊಂಡು ತಮ್ಮ ತಮ್ಮ ಅರಾಜಕತೆಯನ್ನು ಮೆರೆದ ನಂತರ ಇನ್ನೂ ಇಂದು ಸಂಶೋಧನ ಕ್ಷೇತ್ರದ ಅಧ್ಯಯನಕಾರರಿಗೆ ಇದು ಮುಖ್ಯ ಕ್ಷೇತ್ರವೆನಿಸಿದೆ. ಇಲ್ಲಿಯ ಭೌಗೋಳಿಕ ವಿಶೇಷತೆಗಳೆನಿಸಿದ ನಿಸರ್ಗ, ನಿರ್ಮಿತ ಕಲ್ಲುಬಂಡೆಗಳನ್ನು ಬಳಸಿ ರಚನೆಗೊಂಡ ಸ್ಮಾರಕಗಳು ಇಂದು ಅಧ್ಯಯನಕಾರರಿಗೆ ಮುಖ್ಯ ವಿಷಯವಸ್ತುವಾಗಿದೆ. ಈಗಾಗಲೇ ಈ ಕ್ಷೇತ್ರದಲ್ಲಿನ ಹಲವು ವಿಶೇಷತೆಗಳನ್ನು ಕುರಿತು ಅಧ್ಯಯನಗಳು ಸಾಕಷ್ಟು ಆಗಿ ಹೋಗಿವೆ ಹಾಗೂ ಇನ್ನೂ ಹಲವು ಅಧ್ಯಯನಗಳು ನಡೆಯುತ್ತಲೇ ಇವೆ. ಪ್ರಸ್ತುತ ಅಧ್ಯಯನವು ಸಹ ಹಂಪಿ ಕ್ಷೇತ್ರವನ್ನು ಕುರಿತಾಗಿದ್ದು, ರಕ್ಕಸಗಿ ತಂಗಡಗಿ ಯುದ್ಧದ ನಂತರ ಹಂಪಿಯ

ಸ್ಥಿತಿಗತಿ ಎಂಬ ಶೀರ್ಷಿಕೆಯಡಿಯಲ್ಲಿ ವಿಷಯವನ್ನು ವಿಶ್ಲೇಷಿಸಲಾಗಿದೆ. ಅಂದರೆ ಹಂಪಿ ಪರಿಸರದಲ್ಲಿರುವ ಎಲ್ಲಾ ಸ್ಮಾರಕಗಳು, ದೇವಾಲಯಗಳನ್ನು ಇತಿಹಾಸ ಮತ್ತು ಪುರಾತತ್ವದ ವಿಷಯದ ಮೇಲೆ ವಿಶ್ಲೇಸಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**ಒಂದನೇ ಅಧ್ಯಾಯದಲ್ಲಿ ಒಂದರಲ್ಲಿ** ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ವಿಧಾನ, ಅಧ್ಯಯನದ ಸ್ವರೂಪ ಹಾಗೂ ಅಧ್ಯಯನ ಸಮೀಕ್ಷೆಯನ್ನು ವಿವರಿಸಲಾಗಿದೆ.

**ಎರಡನೇ ಅಧ್ಯಾಯದಲ್ಲಿ** ಪ್ರಸ್ತುತ ಅಧ್ಯಯನದ ಐತಿಹಾಸಿಕ ಹಿನ್ನಲೆ, ಭೌಗೋಳಿಕ ಹಿನ್ನೆಲೆ, ಭೌಗೋಳಿಕ ಲಕ್ಷಣಗಳು ಹಾಗೂ ಪ್ರಾಗೈತಿಹಾಸ ಕಾಲದಿಂದ ಮೈಸೂರಿನ ಒಡೆಯರ ಕಾಲದವರೆಗೆ ಕರ್ನಾಟಕಕ್ಕೆ ಸೀಮಿತವಾದರೆ ಈ ಭಾಗದಲ್ಲಿ ಆಡಳಿತ ನಡೆಸಿದ ವಿವಿಧ ರಾಜ ವಂಶಗಳ ಇತಿಹಾಸವನ್ನು ಅವರ ಕುರುಹುಗಳ ಆಧಾರದ ಮೇಲೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಮೂರನೇ ಅಧ್ಯಾಯದಲ್ಲಿ** ರಕ್ಕಸಗಿ ತಂಗಡಗಿ ಯುದ್ಧಕ್ಕೆ ಪ್ರಮುಖ ಕಾರಣಗಳ ಯುದ್ಧ ನಡೆದ ಘಟನೆ ಮತ್ತು ಈ ಯುದ್ಧದಿಂದ ಅಂತಹ ಪರಿಣಾಮಗಳ ಕುರಿತು ಮೌಖಿಕ ಆಕಾರಗಳು, ಗಜಪಡಿಯ ಆಕಾರಗಳು ಹಾಗೂ ವಿಶೇಷವಾಗಿ ದೇಶಿಯ ಮತ್ತು ವಿದೇಶಿಯ ಬರಹಾಗಾರರ ಬರವಣಿಗೆಯ ವಿಷಯಗಳನ್ನು ಉಲ್ಲೇಖಿಸುವಂತಹ ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

**ನಾಲ್ಕನೇ ಅಧ್ಯಾಯದಲ್ಲಿ** ರಕ್ಕಸಗಿ ತಂಗಡಿ ಯುದ್ಧದ ನಂತರದ ಹಂಪಿಯ ಸ್ಥಿತಿಗತಿ ಇತಿಹಾಸ ಮತ್ತು ಪುರಾತತ್ವದ ಹಾಗೂ ಪ್ರಸ್ತುತ ಸಂದರ್ಭದಲ್ಲಿರುವ ಹಂಪಿ ಮತ್ತು ಅದರಷ್ಟೇ ಪ್ರಸಿದ್ಧಿಯನ್ನು ಪಡೆದಿರುವಂತಹ ಸ್ಥಗಳಿಗೆ ಕ್ಷೇತ್ರಕಾರ್ಯ ಕೈಗೊಂಡಾಗ ಅಲ್ಲಿ ದೊರತಂತಹ ಅವಶೇಷಗಳನ್ನು ವಿಶ್ಲೇಷಿಸಿ ಅನೇಕ ವೈವಿದ್ಯಾಮಯ ಸಂಗತಿಗಳು, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದವುಗಳನ್ನು ಇತಿಹಾಸ ಮತ್ತು ಪುರಾತತ್ವ ವಿಷಯಕ್ಕೆ ಸೇರಿದವುಗಳನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಬಲರುವಂತಹ ದೇವಾಲಯಗಳ ಸ್ಮಾರಕ ಶಿಲ್ಪಗಳು ಮತ್ತು ಇನ್ನಿತರ ಪ್ರಕೃತಿಕ (ನೈಸರ್ಗಿಕ ರೂಪ)ಗಳಿಂದ ಪ್ರಸ್ತುತ ದಿನಗಳಲ್ಲಿ ಹಂಪಿ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಆಗುತ್ತಿರುವ ಅಂಶಗಳನ್ನು ಒಂದೆಡೆ ತರುವಂತಹ ಪ್ರಯತ್ನ ಮಾಡಲಾಗಿದೆ.

**ಐದನೆಯ ಅಧ್ಯಾಯವು** ಸಮಾರೋಪವಾಗಿದ್ದು ಒಟ್ಟಾರೆಯಾಗಿ ಹಂಪಿಯ ಇತಿಹಾಸ ಮತ್ತು ಪುರಾತತ್ವ ಹಾಗೂ ಸಾಂಸ್ಕೃತಿಕ ನೀತಿಯಲ್ಲಿ ಬೆಳೆದು ಬಂದಿದೆ. ಈ ಹಂಪಿ ಪರಿಸರದ ಪ್ರದೇಶದ ಕುರಿತಂತಿರುವ ಸಮಗ್ರ ಮಾಹಿತಿಯನ್ನು ಹಲವು ಬಗೆಯ ಚರ್ಚೆಗೆ ಒಳಪಡಿಸಿ ಈ ಪ್ರದೇಶದ ಇತಿಹಾಸ ಮತ್ತು ಪುರಾತತ್ವದ ನೆಲಗಟ್ಟಿನ ಮೇಲೆ ಇತಿಹಾಸದ ತಿರುವನ್ನು ಆಧಾರಗಳ ಮೂಲಕ ತಿಳಿಯಪಡಿಸುವಂತಹ ಪ್ರಯತ್ನವನ್ನು ಸಂಪ್ರಬಂಧದಲ್ಲಿ ಮಾಡಲಾಗಿದೆ.

ಈ ಹಂಪಿ ಪರಿಸರವು ಅತ್ಯಂತ ಪ್ರಾಚೀನ ಮತ್ತು ಐತಿಹಾಸಿಕ ಸ್ಥಳವಾದದ್ದು ಇಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರು ಕ್ರಿ.ಶ. ೧೩೩೬ ರಿಂದ ಕ್ರಿ.ಶ. ೧೬೫೬ರ ವರೆಗೆ ವೈಭವಯುತವಾಗಿ ಮೆರೆದು ಕ್ರಿ.ಶ. ೧೫೬೫ರ ರಕ್ಕಸಗಿ ತಂಗಡಗಿ ಯುದ್ಧದಲ್ಲಿ ಷಾಹಿ ರಾಜ್ಯಗಳಿಂದ ಸೋತು ನಾಶವಾಗುತ್ತ ನಡೆಯಿತು. ಆದರೆ ಈ ಹಂಪಿಯ ನಾಶಕ್ಕೆ ಕೇವಲ ಯುದ್ಧವಷ್ಟೇ ಕಾರಣವಲ್ಲದೆ ಇನ್ನೂ ಹಲವು ಕಾರಣಗಳಿವೆ ಅವು ಅಂದರೆ ಸ್ಥಳಿಯ ಅಥವಾ ವಿದೇಶಿಯರೋ, ನೈಸರ್ಗಿಕ ವಿಕೋಪವೋ ಎಂಬುವುದು ಸಮಸ್ಯಾತ್ಮಕವಾಗಿಯೇ ಉಳಿದಿದೆ. ಆದರೆ ೨ ಶತಮಾನಗಳ ಕಾಲ ಹೆಚ್ಚು ವೈಭವಯುತವಾಗಿ ಮೆರದ ಹಂಪಿಯು ಹಾಳಾಗಿರುವುದಂತು ನಿಜ. ಪ್ರಸ್ತುತ ದಿನಗಳಲ್ಲಿ ಹಂಪಿಯು ಹಾಳು ಕೊಂಪೆಯಾಗಿ ಕಾಣುವ ಅನೇಕ ದೇವಾಲಯಗಳು ಕೋಟೆ–ಕೊತ್ತಲುಗಳು, ಪ್ರಾಚೀನ ರಸ್ತೆಗಳು, ಕೆರೆ–ಬಾವಿಗಳು ನೀರನ್ನು ಒದಗಿಸುವ ಹಂಪಿಯ ಸುತ್ತಲಿನ ಪ್ರಾಚೀನ ಕಾಲುವೆಗಳು, ರಾಜ–ರಾಣಿಯರ ನಿವಾಸಗಳು, ರಾಣಿ ಹಾಗೂ ಸಾಮಾನ್ಯ ಜನರ ಸ್ನಾನ ಗೃಹಗಳು, ಸಾಮನ್ಯ ಜನರ ನಿವಾಸದ ಮನೆಗಳು, ಹಂಪಿಯಷ್ಟೇ ಪ್ರಸಿದ್ಧಿ ಹೊಂದಿದ ಅಕ್ಕಪಕ್ಕದ ಗ್ರಾಮದಲ್ಲಿನ ಕೆಲವು ಪ್ರಾಚೀನ ಸೇತುವೆಗಳು ಮತ್ತು ಹಂಪಿಯಲ್ಲಿನ ಪ್ರಾಚೀನ ಬಜಾರುಗಳು, ಬಿದ್ದಿರುವ ಸ್ಥಳಗಳು ಇಂದು ಹಾಳಾಗಿ ಕಾಡು ಪ್ರಾಣಿಗಳ ವಾಸಸ್ಥಾನಗಳಾಗಿವೆ. ಇನ್ನು ಕೆಲವು ಕಡೆಮಾತ್ರವೇ ಸಂರಕ್ಷಣೆಯಿಂದ ಕೂಡಿವೆ. ಹಾಳಾಗಿದ್ದವುಗಳನ್ನು ಸರಿಪಡಿಸಿಲು ಸರ್ಕಾರ ಎಷ್ಟೇ ಪ್ರಯತ್ನಿಸಿದರೂ ಸಂರಕ್ಷಿಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಸ್ಥಳೀಯ ಸಹಕಾರವು ಕಡಿಮೆ ಆಗುತ್ತಿದೆ. ಆದ್ದರಿಂದ ಈ ಹಂಪಿಯ ಪರಿಸರದ ಕುರಿತು ಮತ್ತು ಅದರಷ್ಟೆ ಪ್ರಸಿದ್ಧಿಯನ್ನು ಹೊಂದಿದ ಪ್ರಾಚೀನ ಐತಿಹಾಸಿಕ ಗ್ರಾಮಗಳ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳು ಆಗುವುದರಿಂದ ಅವುಗಳ ಸಂರಕ್ಷಣೆಯು ಸಾಧ್ಯವಾಗಿ ಮುಂದಿನ ಪೀಳಿಗೆಗೂ ಸಹ ಹಂಪಿ ಐತಿಹಾಸಿಕ ಸ್ಥಳವಾಗಿ ಉಳಿಯಲು ಸಾಧ್ಯ. ಅದನ್ನು ಸಂರಕ್ಷಿಸುವ ಪ್ರಯತ್ನ ಪ್ರತಿಯೊಬ್ಬ ಭಾರತೀಯರ ಕರ್ತವ್ಯ. ಈ ರೀತಿಯ ಪ್ರಾಮುಖ್ಯತೆಯನ್ನು ತಿಳಿಯಪಡಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದಾಗಿದೆ.

## ಆಕರ ಗ್ರಂಥಗಳು

೧. ಅಪರ್ಣ ಕೂ.ಸ., ೧೯೯೯, "ದೇವಾಲಯ ವಾಸ್ತುಶಿಲ್ಪ ಪರಿಚಯ", ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಇಂದುಮತಿ ಪಿ. ಪಾಟೀಲ, ಮಧ್ಯಾಕಾಲೀನ ಭಾರತದ ಇತಿಹಾಸ, (ಕ್ರಿ.ಶ. ೧೨೦೬ ರಿಂದ ೧೫೬೫) ೨೦೦೭, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಸರಸ್ವತಿ ಗೋದಾಮ, ಗುಲಬರ್ಗಾ

೩. ಕುಂದೂರಿ ಈಶ್ವರದತ್ತು ಭಗ್ನ ವಿಜಯನಗರ ಚರಿತ್ರೆ (ಕನ್ನಡನಾನುವಾದ) ಗುರುಮೂರ್ತಿ ಪೆಂಡಕೂರು, ೨೦೧೦ ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಕನ್ನಡ ವಿಷಯಕೋಶ, ೨೦೦೯, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫. ಕರ್ನಾಟಕ ರಾಜ್ಯ ಗೆಜೆಟಿಯರ್, (ದಶವಾರ್ಷಿಕ ಪುರವಣಿ) ೧೯೯೬ ಮೆ. ಅಭಿಮಾನಿ ಪ್ರಕಾಶನ, ಅರಗಿಣಿ ಭವನ, ಡಾ. ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು.

೬. ಕರ್ನಾಟಕ ಪರಂಪರೆ ಸಂಪುಟ–೨, ೧೯೯೨, "ಮಧ್ಯಕಾಲ ಮತ್ತು ಆಧುನಿಕ ಕಾಲ", ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭. ಕಲಬುರ್ಗಿ ಎಂ.ಎಂ., ೧೯೯೪, "ಕರ್ನಾಟಕದ ಕೈಫಫಿಯತ್ತುಗಳು", ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕೊಡದ ಎಸ್.ಬಿ., ೧೯೬೦, ವಿಜಯನಗರ ನಿರ್ಣಾಯಕ ಯುದ್ಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯. ಕೃಷ್ಣ ಕೊಲ್ಹಾರ ಕುಲಕರ್ಣಿ (ಅನು), ೧೯೯೯, ಮಹಮ್ಮದ ಇಬ್ರಾಹಿಂ ಜುಬೇರಿ, ಬುಸಾತಿನೆ ಸಲಾತೀನ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಗೋಪಾಲ ಆರ್., ಚಿಕ್ಕಮಾರೇಗೌಡ ಹಾಗೂ ಗಂಗಾಧರ ಟಿ.ಎಸ್., ವಿಜಯನಗರ ಅಧ್ಯಯನ (ಸಂಪುಟ–೫) ೨೦೧೦ ಕರ್ನಾಟಕ ಸರ್ಕಾರ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೧. ಚೆಲುವರಾಜು, ೨೦೦೦, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಪಿ

೧೨. ದೇವರಕೊಂಡರೆಡ್ಡಿ, ೧೯೯೮, "ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧" ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ದೇಸಾಯಿ ಪಿ.ಬಿ., ೨೦೦೮, "ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆ" ಪ್ರ.ಷ. ೧೨, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೧೪. ನಾಗೇಗೌಡ ಎಚ್.ಎಲ್., ೧೯೬೬, "ಪ್ರವಾಸಿ ಕಂಡ ಇಂಡಿಯಾ ಸಂಪುಟಗಳು.

೧೫. ಭಟ್ ಸೂರಿ ಕೆ.ಜಿ., "ಶಾಸನ ಅಧ್ಯಯನ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ "ಹಂಪಿ ಅಂದು-ಇಂದು ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಮೋಹನ್ ಕೃಷ್ಣರೈ ಕೆ., ಸಮಾಜ ಅಧ್ಯಯನ (ಸಮಾಜ ವಿಜ್ಞಾನಗಳ ಸಂಶೋಧನೆ ಪತ್ರಿಕೆ), ೨೦೧೫, (ಸಂಪುಟ/ಸಂಚಿಕೆ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ರಮಾನಂದ ಕೆ., ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ೨೦೧೦. ದಿವ್ಯಚಂದ್ರ ಪ್ರಕಾಶನ ಬಸವೇಶ್ವರ ನಗರ, ಬೆಂಗಳೂರು.

೧೯. ರಾಬರ್ಟ್ ಸಿವೆಲ್ (ಅನುವಾದ) ಸದಾನಂದ ಕನವಳ್ಳಿ, ಮರೆತುಹೋದ ವಿಜಯನಗರ ಸಾಮ್ರಾಜ್ಯ, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ರಾಮಸ್ವಾಮಿ ಅಯ್ಯಂಗಾರ್, ೨೦೦೬, "ಜೀರ್ಣ ವಿಜಯನಗರಾದರ್ಶಂ" ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ.

೨೧. ಲಕ್ಷ್ಮಣ್ ತೆಲಗಾವಿ ರಾಮರಾಜನ ಬಖೈರು (ರಾಮಾಜಿ ತಿರುಮಲ ಹರಿಕಾರೆಯ), ೨೦೧೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ವಸುಂಧರಾ ಫೆಲಿಯೋಜಾ, ೧೯೭೬, ಪ್ರೇಮದಾಯಿ ಪ್ರಕಾಶನ, ಬೆಂಗಳೂರು.

೨೩. ವಸುಂಧರಾ ಫೆಲಿಯೋಜಾ, ೧೯೮೯, "ಅಳಿದುಳಿದ ಹಂಪೆ" ಪ್ರೇಮಿದಾಯಿ ಪ್ರಕಾಶನ, ಬೆಂಗಳೂರು.

೨೪. ವಾಸುದೇವ ಬಡಿಗೇರ, ೨೦೦೬, ತಾಳಿಕೋಟೆ ಯುದ್ಧದ ಸ್ಥಳ ಸಮೀಕ್ಷೆ ವಿಜಯನಗರ ಅಧ್ಯಯನ ಸಂಪುಟ-೧೧. ಪ್ರಾಚ್ಯಾವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೫. ವಿವೇಕ ರೈ., "ಪ್ರವಾಸಿ ಕಂಡ ವಿಜಯನಗರ" ೨೦೦೫, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ವಿರೂಪಾಕ್ಷ ಪೂಜಾರಹಳ್ಳಿ ವಿಜಯನಗರ ಕಾಲದ ಸಂಸ್ಕೃತಿ (ಬೇಟೆ, ಪಶುಪಾಲನೆ ಮತ್ತು ಕೃಷಿ) ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೭. ಶಿವ ಪ್ರಸಾದ ಟಿ.ಆರ್., ಶ್ರೀಕೃಷ್ಣದೇವರಾಯ, ೨೦೦೯, ಚಿಂತನಗಂಗಾ ಪ್ರಕಾಶನ, ವಿದ್ಯಾನಗರ ದಾವಣಗೆರಿ.

೨೮. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ೨೦೧೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಸೀತಾರಾಮಯ್ಯ ವಿ., ೧೯೩೯, "ಪಂಪಾಯಾತ್ರೆ ನಿತ್ಯಶೋಧನಾ" ಪ್ರಕಟಣಾ ಮಂದಿರ, ಬೆಂಗಳೂರು.

೩೦. ಸೂರ್ಯನಾಥ ಕಾಮತ್., ೧೯೭೭, ಕರ್ನಾಟಕ ಸಂಕ್ಷಿಪ್ತ ಇತಿಹಾಸ ಎಂ.ಸಿ.ಬಿ. ಪಬ್ಲಿಕೇಷನ್ಸ್, ಬೆಂಗಳೂರು.

**ಪಿಎಚ್.ಡಿ. ಸಂಶೋಧನಾ ಪ್ರಬಂಧಗಳು**

೧. ದುರುಗಪ್ಪ ಎಂ.ಕೆ., ೨೦೦೪ :ವಿಜಯನಗರೇತ್ತರ ಕಾಲೀನ ಬೇಡ ಜನಾಂಗದ ಸ್ಥಿತ್ಯಂತರಗಳು ಚಾರಿತ್ರಿಕ ಅಧ್ಯಯನ", ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಮಹೇಶ, ೨೦೦೪, "ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು" ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಶರಣಬಸಪ್ಪ, ೨೦೦೨, "ಕೊಪ್ಪಳ-ಹಂಪಿಯ ಪ್ರದೇಶದ ಪ್ರಾಗಿಹಾಸ ಕಾಲದ ಕಲೆ" ಸಂಶೋಧನಾ ಮಹಾಪ್ರಬಂಧ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಸೋಮಶೇಖರ ಎಸ್.ವೈ., ೨೦೦೧, "ವಿಜಯನಗರ ಕಾಲದ ಸೈನ್ಯ ವ್ಯಸ್ಥೆ ಮತ್ತು ಯುದ್ಧದ ನೀತಿಗಳು", ಸಂಶೋಧನಾ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಎಂ.ಫಿಲ್. ಮಹಾಪ್ರಬಂಧಗಳು**

೧. ಅಯ್ಯಾಳಿ ಯರಿಸ್ವಾಮಿ, ೨೦೧೦, ಹಂಪಿ ಪರಿಸರದ ಐತಿಹ್ಯಗಳು ಚಾರಿತ್ರಿಕ ವಿಶ್ಲೇಷಣೆ, ಎಂ.ಫಿಲ್. ಅಪ್ರಕಟಿತ ಕಿರು ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ತ್ರಿವೇಣಿ, ವಿಜಯನಗರ ಕಾಲದ ಮಹಿಳೆಯರ ಕೊಡುಗೆಗೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ನಾಗರತ್ನ ಬಿ.ಟಿ., ಪ್ರವಾಸಿ ಕಥನಗಳಲ್ಲಿ ವಿಜಯನಗರ ಕಾಲದ ಮಹಿಳೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ನಾಝಿಯಾ ಖಾಜಿ, ಹಂಪಿ ಪರಿಸರದಲ್ಲಿ ಕಂಡುಬರುವ ವಿಜಯನಗರ ಕಾಲದ ಇಂಡೋ–ಇಸ್ಲಾಮಿಕ್ ಶೈಲಿಯ ಸ್ಮಾರಕಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೫. ಮಠದ ಬಸವರಾಜಯ್ಯ ವಿಜಯನಗರ ಕಾಲದ ಸಮಾಜ, ಕೆಲವು ಅನಿಷ್ಟ ಪದ್ಧತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೬. ಮಧು ಎಂ.ಎನ್., ಹೊಸಪೇಟೆ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಶಾರದಾ ಪಾಟೀಲ, ಹಂಪಿಯ ವಿರೂಪಾಕ್ಷ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೮. ಶಿವಲೀಲಾ ಕೆ. ಕಲಾಪುರ ಶಾಸನಗಳು ಮತ್ತು ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

**ವಿಜಯನಗರ ಅಧ್ಯಯನದ ಸಂಪುಟಗಳು**

- ವಿಜಯನಗರ ಅಧ್ಯಯನ – ೨
- ವಿಜಯನಗರ ಅಧ್ಯಯನ – ೩
- ವಿಜಯನಗರ ಅಧ್ಯಯನ – ೪
- ವಿಜಯನಗರ ಅಧ್ಯಯನ – ೮
- ವಿಜಯನಗರ ಅಧ್ಯಯನ – ೧೧
- ವಿಜಯನಗರ ಅಧ್ಯಯನ – ೧೫

**ಇತಿಹಾಸ ದರ್ಶನ ಸಂಪುಟಗಳು**

- ಇತಿಹಾಸ ದರ್ಶನ ಸಂಪುಟ – ೧
- ಇತಿಹಾಸ ದರ್ಶನ ಸಂಪುಟ – ೩
- ಇತಿಹಾಸ ದರ್ಶನ ಸಂಪುಟ – ೫

- ಇತಿಹಾಸ ದರ್ಶನ ಸಂಪುಟ – ೮
- ಇತಿಹಾಸ ದರ್ಶನ ಸಂಪುಟ – ೧೦
- ಇತಿಹಾಸ ದರ್ಶನ ಸಂಪುಟ – ೧೫
- ಇತಿಹಾಸ ದರ್ಶನ ಸಂಪುಟ – ೧೮
- ಇತಿಹಾಸ ದರ್ಶನ ಸಂಪುಟ – ೨೦


**ಆಂಗ್ರ ಪುಸ್ತಕಗಳು**


1. Dallapiccola A.L. (Ed), 1985, Vijayanagar city and Empire, New currents of Reseorch vol- I&II, stuttguart.
2. Dikshit Y.S. (Ed), Early Vijayanagara Study in History and Culture, B.m.s. Memorial foundetion, Bengalore, 1988.
3. Gazeeter of India, Bellary District.
4. Heritage Series, Hampi
5. Ishwari Prasad, History of medival India Shaytri. K.N.A. History of south India.
6. Nagaraja Rao M.S. Vijyanagar, progress of the Research, 1979-83.
7. Nilakanta saytry K.A. Foreign notice of south India.
8. Sewell R. (Tr) Chromicle of fernaw Nuhiz, A Forgotten Empire.
9. Suryanarayana Rao. 1905 History of Vijayanagara The never To be Forgotten Empire, vol-I&II, Madras.
10. Venkataramanayya N. 1933, Vijayangara, The Iriginal of the city and Epire Madras.




# ಕರ್ನಾಟಕ ರಾಜ್ಯ ನಕ್ಷೆಯಲ್ಲಿ ಬಳ್ಳಾರಿ ಜಿಲ್ಲೆ


ಸಿರುಗುಪ್ಪಾ
Siruguppa
Hosapete
ಹೊಸಪೇಟೆ
Bellari
ಬಳ್ಳಾರಿ
Hagari
Bommanahalli
ಹಗರಿ
ಬೊಮ್ಮನಹಳ್ಳಿ
Sandur
ಸೊಂಡೂರ
Hadagali
ಹಡಗಲಿ
Kudligi
ಕೂಡ್ಲಿಗಿ

# ಬಳ್ಳಾರಿ ಜಿಲ್ಲೆ ನಕ್ಷೆ


76°20'
15°15'
15°20'
15°25'
76°25'
76°30'
76°35'
Tungabhadra River
HOSPET
Nagenahalli
Anantashayanagudi
Malapanagudi
Kadirampura
Hampi
VIJAYANAGAR
Anegondi
Kamalapura
Gangavati

# ಹಂಪಿ ಪರಿಸರದ ನಕ್ಷೆ



1856 ರಲ್ಲಿ ವಿರುಪಾಕ್ಷ ದೇವಾಲಯ



1983 ರಲ್ಲಿ ವಿರುಪಾಕ್ಷ ದೇವಾಲಯ



ಪ್ರಸ್ತುತ ವಿರುಪಾಕ್ಷ ದೇವಾಲಯ



1856 ರಲ್ಲಿ ವಿರುಪಾಕ್ಷ ಗೋಪುರ



1983 ರಲ್ಲಿ ವಿರುಪಾಕ್ಷ ಗೋಪುರ



ಪ್ರಸ್ತುತ ವಿರುಪಾಕ್ಷ ಗೋಪುರ



1856 ರಲ್ಲಿ ಉಗ್ರ ನರಸಿಂಹ



1983 ರಲ್ಲಿ ಉಗ್ರ ನರಸಿಂಹ



ಪ್ರಸ್ತುತ ಉಗ್ರ ನರಸಿಂಹ



1856 ರಲ್ಲಿ ಕೃಷ್ಣದೇವಾಲಯ



1983 ರಲ್ಲಿ ಕೃಷ್ಣದೇವಾಲಯ



ಪ್ರಸ್ತುತ ಕೃಷ್ಣದೇವಾಲಯ



1856 ರಲ್ಲಿ ಕೃಷ್ಣದೇವಾಲಯ ಮಹಾದ್ವಾರ



1983 ರಲ್ಲಿ ಕೃಷ್ಣದೇವಾಲಯ ಮಹಾದ್ವಾರ



ಪ್ರಸ್ತುತ ಕೃಷ್ಣದೇವಾಲಯ ಮಹಾದ್ವಾರ



1856 ರಲ್ಲಿ ವಿಠ್ಠಲ ದೇವಾಲಯದ ಮಹಾದ್ವಾರ



1983 ರಲ್ಲಿ ವಿಠ್ಠಲ ದೇವಾಲಯದ ಮಹಾದ್ವಾರ



ಪ್ರಸ್ತುತ ವಿಠ್ಠಲ ದೇವಾಲಯದ ಮಹಾದ್ವಾರ



1856 ರಲ್ಲಿ ಕಲ್ಲಿನ ರಥ



1983 ರಲ್ಲಿ ಕಲ್ಲಿನ ರಥ



ಪ್ರಸ್ತುತ ಕಲ್ಲಿನ ರಥ



1856 ರಲ್ಲಿ ವಿಠ್ಠಲ ದೇವಾಲಯದ ಸ್ತಂಭ ಮಂಟಪ



1983 ರಲ್ಲಿ ವಿಠ್ಠಲ ದೇವಾಲಯದ ಸ್ತಂಭ ಮಂಟಪ



ಪ್ರಸ್ತುತ ವಿಠ್ಠಲ ದೇವಾಲಯದ ಸ್ತಂಭ ಮಂಟಪ



1856 ರಲ್ಲಿ ಕಮಲ ಮಹಲ್



1983 ರಲ್ಲಿ ಕಮಲ ಮಹಲ್



ಪ್ರಸ್ತುತ ಕಮಲ ಮಹಲ್

